ಲಲಿತ ಸಾಹಿತ್ಯಮಾಲೆಯ ನಾಲ್ವತ್ತೆರಡನೆಯ ಕುಡಿ
ಹತ್ತನೆಯ ವರುಷದ ಮೊದಲನೆಯ ಪ್ರಕಟನೆ

# ಕಪ್ಪು ಹುಡುಗಿ

ಕಥಾಸಂಗ್ರಹ

ದ. ಬಾ. ಕುಲಕರಣಿ



ಲಲಿತ ಸಾಹಿತ್ಯಮಾಲೆ, ಧಾರವಾಡ

ಸುಂದರ ಪ್ರತಿ ೧-೪-೦

ಫೆಬ್ರುವರಿ, ೧೯೩೭

ಸಾದಾ ಪ್ರತಿ ೦-೧೨-೦

ಪ್ರಕಾಶಕರು :
**ದ. ಬಾ. ಕುಲಕರಣಿ**
ಲಲಿತ ಸಾಹಿತ್ಯಮಾಲೆ, ಧಾರವಾಡ

ಮಾರಾಟಗಾರರು :
**ಮನೋಹರ ಗ್ರಂಥ ಭಾಂಡಾರ, ಧಾರವಾಡ**
**ಕನ್ನಡ ಪುಸ್ತಕಾಲಯ, ಬೆಳಗಾವಿ**

ಮುದ್ರಕರು :
**ಶೇ. ಗೋ. ಕುಲಕರಣಿ**
ಸಾಧನ ಮುದ್ರಣಾಲಯ, ಧಾರವಾಡ

# ಮುನ್ನುಡಿ

ಸಣ್ಣ ಕತೆಯ ಕ್ಷೇತ್ರ ಮೊದಲಿನಂತೆ ಈಗ ಮರ್ಯಾದಿತವಾಗಿ ಉಳಿದಿಲ್ಲ. ನಮ್ಮನ್ನು ಕೆಣಕಿ ಕಾಡುತ್ತಿರುವ ಸಾಮಾಜಿಕ ಸಮಸ್ಯೆಗಳು ಸಾಹಿತ್ಯರಂಗದಲ್ಲಿಯೂ ಕಾಲು ಚಾಚಿವೆ.

" ಕಪ್ಪು ಹುಡಿಗಿ " ಸಂತಾನ ನಿರೋಧದ ಒಂದು ಪಾರ್ಶ್ವವನ್ನು ಎತ್ತಿ ತೋರಿಸುತ್ತದೆ. ಜೀವನದ ಹೋರಾಟ ನಿಕರವಾದಂತೆ, ಆರ್ಥಿಕ ದೈಹಿಕ ಸಂಪತ್ತು ಕ್ಷೀಣವಾದಂತೆ ಸಂತಾನ ನಿರೋಧದ ಕೂಗು ಸ್ಫುಟವಾಗುತ್ತ ಬಂದಿದೆ. ಆದರೆ ನಮ್ಮ ಜನತೆ ಇನ್ನೂ ಹೊಸ ವಿಚಾರಗಳಿಗೆ ಒಗ್ಗಿಕೊಂಡಿಲ್ಲ. " ಸಂಕ್ರಾಂತಿ ಕಾಲ " ವೆಂದು ಸಮರ್ಥನೆ ಹೇಳುವಂತಿಲ್ಲ. ಏಕೆಂದರೆ ಸಂಕ್ರಾಂತಿಯೆಂಬುದು ಯಾವ ಕಾಲಕ್ಕೂ ಮುಂದುವರಿಯತಕ್ಕದ್ದೆ. ಹಳ-ಹೊಸದರ ತಿಕ್ಕಾಟ ಜೀವನದ ಒಂದು ಲಕ್ಷಣವೆ ಆಗಿದೆಯೊ ಏನೊ ? ಹೇಗಿದ್ದರೂ ಒಂದು ಮಾತನ್ನು ಮಾತ್ರ ನಾವು ಒಪ್ಪಿಕೊಳ್ಳಲೇಬೇಕು: ಪ್ರಗತಿ ಪಥದಲ್ಲಿ ನಮ್ಮ ಜನ ಬಸವನ ಹುಳು. ಪಾಶ್ಚಾತ್ಯ ನಾಗರಿಕತೆಗೆ ಗಂಡು ಕೂಡಲೆ ಮನಸೋತಿತು. ನಗರಗಳಲ್ಲಿ ಮುಂದುವರಿದ ಹೆಣ್ಣೂ ಕೆಲವು ಆದಕ್ಕೆ ಹೊಂದಿಕೊಂಡುವು. ಆದರೆ ಬಹುಸಂಖ್ಯಾಕರಾದ ಹಳ್ಳಿಗರು, ಚಿಕ್ಕ-ಪುಟ್ಟ ಹಳ್ಳಿ-ಪಟ್ಟಣಗಳಲ್ಲಿಯ ಹೆಣ್ಣು ಮಕ್ಕಳು ಈ ನಾಗರಿಕತೆಯನ್ನು ಅರ್ಥಮಾಡಿಕೊಂಡಿಲ್ಲ " ಲೇಡಿ ಟೈಪಿಸ್ಟ್ " ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ಬೆಳೆದ ಹೆಣ್ಣು ಹೆಂಡತಿಯಾಗದೆ ಒಂದು ಗಂಡಿನ ಜೊತೆಗೆ ಸಲುಗೆಯಿಂದ, ಸ್ನೇಹದಿಂದ ಇರುವುದು ಸಾಧ್ಯವೆ ಎಂಬ ಪ್ರಶ್ನೆ; "ಸಾಧ್ಯವೆ ಇಲ್ಲ" ಎಂಬ ಉತ್ತರ-ಎರಡೂ ನಮ್ಮ ಜನರಲ್ಲಿ ಸಿದ್ಧವಾಗಿವೆ. ನಗರಗಳಲ್ಲಿರುವ ಗಂಡಿಗೆ ಈ ಅಂಶ ಕಾಣದೆ ಹೋದರೂ, ಹಳ್ಳಿಗೆ ಬಂದಾಗ ಅದು ಅವನನ್ನು ಎದುರಿಸುತ್ತದೆ, ಬೆನ್ನಟ್ಟುತ್ತದೆ. " ಇವಳು ನನ್ನ ಸ್ನೇಹಿತಳು " ಎಂದು ಹೇಳುವುದಕ್ಕೂ ಹಿಂಜರಿಯುವಷ್ಟು ಪ್ರಕಾಶ ಮುದುಡಿಕೊಳ್ಳುತ್ತಾನೆ. ಇದರ ಜೊತೆಗೆ ಟೈಪಿಸ್ಟ್ ಸಂಧ್ಯೆಯ ಮನಸ್ಸು ಯಾವ ಅವ್ಯಕ್ತಕ್ಕಾಗಿ ಹಂಬಲಿಸುತ್ತಿತ್ತೋ

ಅದೂ ಸೂಚಿತವಾಗಿದೆ. ಈ ಮನೋವಿಶ್ಲೇಷಣೆ ವಿವರವಾಗಿ, ನಿಧಾನವಾಗಿ ಬಿಡಿಸಿದ ಚಿತ್ರವಲ್ಲ; ಜಗ್ಗನೆ ಮಿಂಚಿನಲ್ಲಿ ಮೂಡಿಹೋಗುವ ವಿಶಾಲದೃಶ್ಯದ ನಿಮಿಷದರ್ಶನ.

"ಇನ್ನೊಂದು ಮದುವೆ" ಯನ್ನು ಸೂಚಿಸುವ ಪದ್ಮಾ ಓದು ಕಲಿತು ಎಚ್ಚೆತ್ತೆನೆಂದುಕೊಳ್ಳುವ ಸ್ತ್ರೀ ಪ್ರತಿನಿಧಿ. ಆಕೆಯ ಮಾತಿನಲ್ಲಿ, ತತ್ವದಲ್ಲಿ ಜಾಗೃತ ಸ್ತ್ರೀತ್ವದ ಹೊಗರಿದೆ. ಆದರೆ ಜಾನಕಿಯಂತಹ ಜನಸಾಮಾನ್ಯರನ್ನು ಎಳೆದುಕೊಂಡು ಹೋಗುವ ಶಕ್ತಿ ಅವಳಿಗೆ ಇಲ್ಲವೆಂಬುದು ಶೋಚನೀಯ. ಇಂತಹ ವ್ಯಕ್ತಿಗಳ ಆವೇಶ ಅರಣ್ಯರೋದನವಾಗಿಯೆ ಇನ್ನೂ ಉಳಿದಿದೆ. ಇದಕ್ಕೆ ಕಾರಣವನ್ನಾಗಲಿ, ಈ ಸಮಸ್ಯೆಗೆ ಪರಿಹಾರವನ್ನಾಗಲಿ ಲೇಖಕರು ಹೇಳುವುದಿಲ್ಲ. ಹೇಳಬೇಕಾಗಿಯೂ ಇಲ್ಲ. ಸಮಸ್ಯೆಯ ನಿರೂಪಣೆಯೆ ಲೇಖಕರ ಉದ್ದೇಶ. ಓದುಗನ ಬುದ್ಧಿಯನ್ನು ಅವರು ಒಪ್ಪಿಕೊಳ್ಳುತ್ತಾರೆ.

ದಾಂಪತ್ಯದ ರಸ–ವಿರಸಗಳು ಸಾಹಿತ್ಯಕ್ಕೆ ಚಿರಂತನ ಸಾಮಗ್ರಿ. ಎಂದೆಂದಿಗೂ ಹಳೆಯದಾಗದೆ ಉಳಿಯುವ ವಿಷಯ ಅದೊಂದೆ—ಪ್ರೀತಿ. ದಾಂಪತ್ಯದಲ್ಲಿ ಪ್ರೀತಿ ವಿಲಕ್ಷಣ ರೂಪಗಳನ್ನೂ ವಿಚಿತ್ರ ಅವಸ್ಥೆಗಳನ್ನೂ ತಾಳುತ್ತದೆ. ತನ್ನ ಗಂಡ ತನ್ನನ್ನು ಒಮ್ಮೆಯಾದರೂ ಒಳಿತಾಗಿ ಬಯ್ಯಲೊಲ್ಲನಲ್ಲ ಎಂದು ಹೆಂಡತಿ ಕನವರಿಸುತ್ತಾಳೆ. ಈಕೆಯನ್ನು ಹೇಗೆ ಬಯ್ಯಲಿ ಎಂದು ಗಂಡ ಗೋಳಾಡುತ್ತಾನೆ. ಈ "ಬಯಕೆಯ ನೋವು" ನಗೆಯಲ್ಲಿಯೆ ಕೊನೆಗಾಣಬೇಕಷ್ಟೆ ? "ತೌರಿನ ತಗಾದೆ" ಯನ್ನು ಓದಿದಾಗ ಲೇಖಕರು ಇನ್ನೂ ನವವಿವಾಹಿತರೇನೊ ಎನಿಸುತ್ತದೆ. ಹೊಸ ಪ್ರಣಯದ ರುಚಿಯನ್ನು ಈವರೆಗೂ ಅವರು ಕಾಪಾಡಿಕೊಂಡಿರಬಹುದೇ ? ಅಥವಾ ಅದರ ನೆನಪೆ ಅಷ್ಟು ಅಚ್ಚಳಿಯದೆ ಉಳಿದಿದೆಯೆ—ಈ ವಿಚಾರ ನಮಗೆ ಬೇಕಾಗಿಲ್ಲ. "ತೌರಿನ ತಗಾದೆ" ಯನ್ನು ಗಂಡ ಹೇಳಿದರೆ "ಇವರ ಹುಚ್ಚು" ನ್ನು ಹೆಂಡತಿ ಹೇಳುತ್ತಾಳೆ. ಅದೇ ಕಥೆಯಾದರೂ ಹೇಳುವ ವ್ಯಕ್ತಿ ಬೇರೆಯಾದುದರಿಂದ ಕಥೆಯ ಮೆರುಗು ಬೇರೆ. ಇನ್ನೊಬ್ಬ ವ್ಯಕ್ತಿ ತನ್ನನ್ನು ಹೇಗೆ ಕಾಣುತ್ತಾನೆ (ಳೆ) ಎಂಬುದನ್ನು ತಿಳಿಯುವ ಪ್ರಯತ್ನ, ಆತ್ಮಜ್ಞಾನಕ್ಕೆ ಹೊರಗಿನವನಾಗಿ ನಿಂತು ತನ್ನನ್ನೆ ತಾನು ನೋಡಿಕೊಳ್ಳುವ ಹದಕ್ಕೆ ಸೋಪಾನವೆಂದು ಹೇಳುತ್ತಾರೆ.

ನಮ್ಮನ್ನು ದಾಟಿ ಹೋಗಿ, ನಮ್ಮ ಮನಸ್ಸು ಇನ್ನೊಬ್ಬರ ಅಂತಃಕರಣದಲ್ಲಿ ಬೆರೆಯಬೇಕು. ಸಾಹಿತ್ಯ ನಮಗೆ ಅದನ್ನು ಕಲಿಸದಿದ್ದರೆ ನಾವು ಓದಿ ಉಪಯೋಗವಿಲ್ಲ.

ಹೊರಗಿನವನಾಗಿ ನಿಂತು ನೋಡುವ ಈ ಗುಣದಿಂದಲೆ ಶ್ರೀ. ದ. ಬಾ. ಕುಲಕರ್ಣಿಯವರ ಕಥಾಶೈಲಿಗೆ ಒಂದು ಲಕ್ಷಣವುಂಟಾಗಿದೆ. ಇವರ ಕತೆ ಮಧ್ಯದಲ್ಲಿಯೆ ಆರಂಭವಾಗುತ್ತವೆ. ಆಮೇಲೆ ಹಿಂದಿನ ಕತೆಯನ್ನು ಹೆಣೆಯುತ್ತ ಬರುತ್ತಾರೆ. ಕತೆಯ ನಿರೂಪಣೆಯಲ್ಲೂ ಜಟಿಲತೆಯಾಗಲಿ, ವಿಷಯಾಂತರಗಲಿ ಎಲ್ಲಿಯೂ ಕಾಣವೆಂದೇ ಹೇಳಬೇಕು. ಭಾಷೆ ಕತೆಯನ್ನು ಹಿಂದೆ ಸರಿಸಿ ತಾನು ಮುಂದೆ ನಿಲ್ಲುವದಿಲ್ಲ. " ಬಯಕೆಯ ನೋವಿ " ನಲ್ಲಿ ಈ ಲೇಖಕರು ಮೈಸೂರಿನವರಂತೆ ಮಾತಾಡಿದಾಗ ಮಾತ್ರ ಭಾಷೆ " ನಾನು ಕೂಡ ಬಂದಿದೇನೆ " ಎಂದು ಸಾರುತ್ತದೆ.

ಈಗಿನ ಎಚ್ಚತ್ತ ಹೆಣ್ಣು ನಮ್ಮ ಸಮಾಜವನ್ನು ಕಾಣುವ ರೀತಿ, ಆಕೆಯ ಆದರ್ಶ, ಅಸಹಾಯತೆ, ಎದೆಗಾರಿಕೆ—ಇವೆಲ್ಲವನ್ನೂ ಲೇಖಕರು ಸಹಾನುಭೂತಿಯಿಂದ ಚಿತ್ರಿಸಿದ್ದಾರೆ. ಇವರ ' ಪರಿಹಾರ ' ಕಾದಂಬರಿಯಲ್ಲಿ ಗೆದ್ದು ನಿಂತ ದಿಟ್ಟ ಹೆಣ್ಣು ಕೃಷ್ಣಾ ಒಳಗೇ ಬೆಳೆಯುತ್ತಿದ್ದಾಳೆಂಬುದಕ್ಕೆ ಈ ಕತೆಗಳಲ್ಲಿ ಬರುವ ಡಾ. ಜಾನಕಿ, ಮಾಯಿ, ಸಂಧ್ಯಾ, ಪದ್ಮೆಯರು ಸಾಕ್ಷಿ ನುಡಿಯುತ್ತಿದ್ದಾರೆ. ಆ ಪಾತ್ರ ಪೂರ್ಣವಾಗಿ ಇನ್ನೊಂದು ಕಾದಂಬರಿಯಲ್ಲಿ ಕಾಣಿಸಿಕೊಂಡೀತೆಂದು ನಂಬುತ್ತೇನೆ.

ಪುಟ್ಟ ಪುಸ್ತಕಕ್ಕೆ ದೊಡ್ಡ ಮುನ್ನುಡಿಯಾಯಿತೊ ಏನೋ! ಲೇಖಕರು ಇನ್ನಷ್ಟು ಕತೆಗಳನ್ನು ಈ ಗ್ರಂಥಕ್ಕೆ ಕೂಡಿಸಿದ್ದರೆ ಓದುಗರು ಅವರನ್ನು ಹರಸುತ್ತಿದ್ದರು.

ಹಾವೇರಿ — ರಾ. ಕು.

೨೨–೨–೧೯೫೬

# ನಿವೇದನೆ

ಇದು, ನನ್ನ ಎರಡನೆಯ ಕಥಾಸಂಗ್ರಹ—ಲಲಿತ ಸಾಹಿತ್ಯಮಾಲೆಯ ಹತ್ತನೆಯ ವರುಷದ ಮೊದಲ ಕುಡಿಯಾಗಿ ಪ್ರಕಟವಾಗುತ್ತಿದೆ.

'ಕಪ್ಪು ಹುಡುಗಿ' ಎಂಬ ಕತೆಗೆ ಜಾಗತಿಕ ಕಥಾ ಸ್ಪರ್ಧೆಯ ಕನ್ನಡ ವಿಭಾಗದಲ್ಲಿ ಎರಡನೆಯ ಮೆಚ್ಚು ದೊರೆತಾಗ ಈ ಕತೆಯೊಡನೆ ಇನ್ನಷ್ಟು ಕತೆಗಳನ್ನು ಸೇರಿಸಿ ಕೂಡಲೆ ಒಂದು ಸಂಗ್ರಹ ಪ್ರಕಟಿಸಬೇಕೆಂದು ಮಿತ್ರರು ಸೂಚಿಸಿದ್ದರು. ಈ ಎರಡು ವರುಷಗಳಿಗೂ ಮಿಕ್ಕಿದ ಅವಧಿಯಲ್ಲಿ ಆ "ಇನ್ನಷ್ಟು" ಭರ್ತಿಯಾಗಲೇ ಇಲ್ಲ. ಈಗಲೂ ಗಾತ್ರ ತುಂಬಿಕೊಳ್ಳದ ಈ ಸಂಗ್ರಹವನ್ನು ಪ್ರಕಟಿಸುವಾಗ ಆ ಪ್ರಜ್ಞೆ ಕೆಣಕದೆ ಇಲ್ಲ....ಇರಲಿ.

ಇಲ್ಲಿನ ಕತೆಗಳಲ್ಲಿ "ಬಯಕೆಯ ನೋವು" ಒಂದನ್ನುಳಿದು ಉಳಿದವು "ಕರ್ಮವೀರ", "ದೀಪದಾನ", "ಪ್ರಪಂಚ" ಮತ್ತು "ವೀರಮಾತೆ" ಪತ್ರಿಕೆಗಳಲ್ಲಿ ಈ ಮೊದಲು ಬೆಳಕು ಕಂಡಿವೆ. ಅಲ್ಲದೆ "ಜಾಗೀರಿಯ ದಿಂಬು" ಮತ್ತು "ಲೇಡೀ ಟೈಪಿಸ್ಟ" ಈ ಎರಡು ಕತೆಗಳು ಅದಕ್ಕೂ ಮೊದಲು 'ಆಕಾಶವಾಣಿ'ಯ ಧಾರವಾಡ ಕೇಂದ್ರದಿಂದ ಬಿತ್ತರಿಸಲ್ಪಟ್ಟಿವೆ. ಈ ಕಾರಣಕ್ಕಾಗಿ ಆಯಾ ಪತ್ರಿಕೆಯ ಸಂಪಾದಕರಿಗೂ ಆಕಾಶವಾಣಿಯ ಅಧಿಕಾರಿಗಳಿಗೂ ನಾನು ಋಣಿಯಾಗಿದ್ದೇನೆ.

ಗೆಳೆಯರಾದ ಶ್ರೀ. "ರಾ. ಕು." ಅವರು ರಸಿಕ ವಿಮರ್ಶಕರೂ; ನಿಶಿತ ಲೇಖಕರು. ಅವರು ನನ್ನ ಕತೆಗಳಿಗೆ ಮುನ್ನುಡಿ ನುಡಿದು ತಮ್ಮ ಸದಾಶಯವನ್ನೂ ಪ್ರೀತಿಯನ್ನೂ ವ್ಯಕ್ತಗೊಳಿಸಿದ್ದಾರೆ. ಅವರಿಗೆ ನನ್ನ ಹಾರ್ದಿಕ ವಂದನೆಗಳು.

ಲಲಿತ ಸಾಹಿತ್ಯಮಾಲೆ
ಧಾರವಾಡ
೨೪—೨—೧೯೫೬

—ದ. ಬಾ. ಕುಲಕರಣಿ.

# ಪರಿವಿಡಿ

# ಕಪ್ಪು ಹುಡುಗಿ

## ೧

ಸುಂದರರಾಯನಿಗೆ ಮನೆತುಂಬ ಮಕ್ಕಳು. ನಾಲ್ಕು ಗಂಡು; ನಾಲು ಹೆಣ್ಣು. ಹಿರಿಯಮಗಳು ಸುನಂದಾ ಮದುವೆಯಾಗಿ ಬಾಣಂತಿತನಕ್ಕೆ ತವರಿಗೆ ಬಂದಿದ್ದಾಳೆ. ತಾಯಿ ಮಂದಾಕಿನಿಗೂ ಆಗ ದಿನ ತುಂಬಿವೆ. ಅಕ್ಕ ಮುಂದೋ, ತಾಯಿ ಮುಂದೊ ಎಂದು ಎರಡನೆಯ ಮಗಳು ಜಾನಕಿ ತಾನು ಎದುರಿಸ ಬೇಕಾದ ಇಬ್ಬರ ಬಾಣಂತಿ ಉಪಚಾರಕ್ಕಾಗಿ ಚಿಂತಿಸುತ್ತಿದ್ದಾಳೆ.

ಜಾನಕಿಯದೂ ಮದುವೆಯಾಗಿದ್ದರೆ ಅವಳೂ ಇದೇ ಸಮಯ ಹೆರಿಗೆಗೆ ತವರಿಗೆ ಬಂದು ಸೇರುತ್ತಿದ್ದಳೇನೋ ! ಆದರೆ ಅಕ್ಕನಿಗೆ ವರ ಗೊತ್ತಾಗಿ, ತಂದೆ ಇವಳಿಗಾಗಿ ನಾಡನ್ನೆಲ್ಲ ತುಳಿದು ಬಂದರೂ ಅವಳ ಕಪ್ಪುಮುಖಕ್ಕೆ ಒಂದು ಗಂಡು ಒಲಿದುಬರಲಿಲ್ಲ. ಅವಳ ಮದುವೆಗೆ ಪ್ರತ್ಯೇಕ ಖರ್ಚು ಮಾಡಬೇಕಾಯಿತಲ್ಲಾ—ಎಂದು ಯೋಚಿಸಿ ಹಣ್ಣಾದ ಸುಂದರ–ಮಂದಾ ಕಿನಿಯರಿಗೆ ಒಂಬತ್ತನೆಯ ಸಂತಾನ ಕಾದು ಕುಳಿತಿತ್ತು;-ಅದೂ ಮೊಮ್ಮಗನ ಜನನದ ಸಮಯಕ್ಕೇ.

ಮಂದಾಕಿನಿಗೆ ನಾಚಿಕೆ: ಮಗಳದೊಂದು ಮೊದಲ ಬಾಣಂತಿತನ ವನ್ನೂ ತೆರವುಗೈಯಿಂದ ಮಾಡಲಾರದ ತನ್ನ ದುರದೃಷ್ಟವನ್ನು ದೂರು ತ್ತಾಳೆ. ವರ ಹತ್ತದೆ ಕುಳಿತ ಹರೆಯದ ಹುಡುಗಿ ಜಾನಕಿಗೆ ತಾನೂ ಅವಳ ಅಕ್ಕನೂ ಬಾಣಂತಿಯರಾಗಿ ಕಾಡಬೇಕಾಯಿತಲ್ಲಾ—ಎಂದು ಕೊರಗು ತ್ತಾಳೆ. ಆದರೆ ತಾನೂ ತನ್ನ ತಾಯಿಯ ಎರಡು ಬಾಣಂತಿತನದಲ್ಲಿ ದುಡಿ ದದ್ದನ್ನು ನೆನಸಿ ಸಮಾಧಾನ ಮಾಡಿಕೊಳ್ಳುತ್ತಾಳೆ.

ಮಂದಾಕಿನಿ ಶಾಲೆ ಬಿಟ್ಟದ್ದು ತಾಯಿಯ ಆರನೆಯ ಹೆರಿಗೆಯ ಉಪಚಾರಕ್ಕಾಗಿಯೆಂದೇ; ಅದೂ ಅವಳ ಹದಿನೈದನೆಯ ವಯಸ್ಸಿನಲ್ಲಿ. ತವರಿನಲ್ಲಿ ತನ್ನ ಹಿಂದೆ ಹುಟ್ಟಿದ ತಂಗಿಯರನ್ನು ಅವಳೇ ಹಿರಿಯಳಾಗಿ

ಆಡಿಸಿದ್ದಾಳೆ. ಅವಳು ಶಾಲೆ ಬಿಟ್ಟು ಉಪಚರಿಸಿದ ತಾಯಿಯ ಹೆರಿಗೆ ಅವರಿಗೆ ಪ್ರಥಮ ಗಂಡು ಸಂತಾನ. ಪ್ರಮೀಲಾರಾಜ್ಯವೆಂದು ಊರವರಿಂದ ಅನ್ನಿಸಿಕೊಂಡ ಅವಳ ತವರುಮನೆಯಲ್ಲಿ ಅವಳಿಗೆ ನಾಲ್ಕುಜನ ತಂಗಿಯರು. "ಪಂಚಕನ್ಯಾ ಸ್ಮರೇನ್ನಿತ್ಯಂ ಮಹಾಪಾತಕ ನಾಶನಂ" ಎಂದು ತಂದೆ ಹಾಡಿ ಹರಸಿದ್ದನ್ನು ಆವಳು ಇಂದಿಗೂ ನೆನಪು ಮಾಡಿಕೊಳ್ಳುತ್ತಾಳೆ.

ಆಗ ತನಗೂ ಅಪರೂಪನಾದ ತಮ್ಮನನ್ನು ಹೆತ್ತ ತಾಯಿಯನ್ನು ಅವಳು ಒಳ್ಳೆ ಹುರುಪಿನಿಂದ ಉಪಚರಿಸಿದ್ದಳು. ಇವಳ ಕೈಯಲ್ಲೇ ಬೆಳೆದ ವಸಂತ, ತಾಯಿಯನ್ನು ಚಿಕ್ಕಂದಿನಲ್ಲೇ ಕಳೆದುಕೊಂಡು ಅಕ್ಕನ ಪಾಲನೆಯಲ್ಲೇ ಬೆಳೆದ. ಅವನು ಹುಟ್ಟಿದ ಮರುವರುಷ ಮಂದಾಕಿನಿಯ ಮದುವೆಯಾಯಿತು. ಅವಳು ಗಂಡನ ಮನೆಗೆ ಹೊರಟಾಗ ಈ ಮಗುವನ್ನು ಕಿತ್ತಿ ಇಟ್ಟು ಬರಬೇಕಾಗಿತ್ತು. ಮುಂದೆ ಒಂದು ವರುಷಕ್ಕೆ ತಾನು ಬಸಿರಿಯಾಗಿ ತಾಯಮನೆಗೆ ಹೋದಾಗ ತಾಯಿ ಇವಳಿಗಿಂತ ಮೂರು ತಿಂಗಳು ಮೊದಲೇ ಬಾಣಂತಿಯಾದಳು; ಅದೂ ಗಂಡುಮಗು. ಮಂದಾಕಿನಿಗೆ ಹೆರಿಗೆಯಾಗಿ ಹಿರಿಯ ಮಗಳು ಈ ಸುನಂದಾ ಹುಟ್ಟಿದಾಗ ಅವಳ ಅಜ್ಜಿ ಹಸಿಮೈಯಲ್ಲೇ ಉಪಚರಿಸಲು ನಿಂತಳು. ಏನಾಯಿತೋ—ಅವಳ ಆ ಹಸುಗೂಸು ಹೋಗಿಬಿಟ್ಟಿತು. ಮಂದಾ ಮೂರು ತಿಂಗಳು ಕಳೆದು ಗುಡಿಗೆಹೋಗಿ ಬಂದಾಗ ತಾಯಿ ಹಾಸಿಗೆ ಹಿಡಿದಳು; ಮತ್ತೆ ಮೇಲೇಳಲಿಲ್ಲ.

ಮಂದಾಕಿನಿ ಹನ್ನೊಂದರಲ್ಲಿ ಹೆತ್ತನಿಬ್ಬಣ ಹೊರಟಾಗ ತಾಯಿ ಇದ್ದಿಲ್ಲ. ಜತೆಗೆ ವಸಂತ ಇವಳ ಬೆನ್ನಿಗೇ ಬಂದಿದ್ದ. ತಾಯಿ ಸಾಯುವಾಗ ಮಗು ವಸಂತನನ್ನು ಮಂದಾಕಿನಿಯ ಉಡಿಯಲ್ಲಿ ಹಾಕಿದ್ದಳು. ಅವನ ರಕ್ಷಣೆಯ ಭಾರ ಈ ಹಿರಿಯಕ್ಕ ತಾಯಾಗಿಯೇ ನಿರ್ವಹಿಸಬೇಕಾಯಿತು.

ವಸಂತ—ಸುನಂದಾ ಸುಂದರರಾಯರ ಮನೆಯಲ್ಲಿ ಜೊತೆಯಾಗಿಯೇ ಬೆಳೆದರು. ಮಂದಾಕಿನಿ ತನ್ನ ಬೆನ್ನಿನ ಒಬ್ಬ ತಂಗಿಯನ್ನು ತನ್ನ ಮೈದುನನಿಗೇ ತಂದುಕೊಂಡಳು. ಆ ತಂಗಿ ಕುಂದಾ ಅಕ್ಕನ ನಾಲ್ಕೂ ಹೆರಿಗೆಗಳಲ್ಲಿ ಉಪಚರಿಸಿದಳು. ಅವಳಿಗೆ ಮಕ್ಕಳಾಗಲಿಲ್ಲ. ಅವಳ ಗಂಡ ಶ್ರೀಪತಿ ಸರಕಾರೀ ಆಸ್ಪತ್ರೆಯಲ್ಲಿ ಕಂಪೌಂಡರ ಆಗಿದ್ದ. ಅಣ್ಣನಿಗೆ ಐದನೆಯ ಮಗು ವಾದಾಗ ಅವನಿಗೆ ಪುಣೆಗೆ ವರ್ಗವಾಯಿತು.

ಮಂದಾಕಿನಿ ತಾನೇ ಪಾಲನೆಮಾಡಿ ಸಲುಹಿದ ವಸಂತನಿಗೆ ಸುನಂದೆಯನ್ನು ಧಾರೆಯೆರೆಯಬೇಕೆಂಬ ತನ್ನ ಆಶಯವನ್ನು ತಂದೆಗೆ ಹೇಳಿದಾಗ ಅವರು ನಿನಗೆ ತಿಳಿದಂತೆ ಮಾಡು'—ಎಂದಿದ್ದರು. ಸುಂದರರಾಯ 'ಜಾನಕಿಯನ್ನು ಅವನಿಗೆ ಕೊಡೋಣ; ಸುನಂದಾಗೆ ಬೇರೆ ವರ ನೋಡುತ್ತೇನೆ'—ಎಂದರೆ 'ಇಲ್ಲ; ಹುಟ್ಟಿದಾಗ ಅಪ್ಪನ ಮುಂದೆಯೇ ಮಾತು ಕೊಟ್ಟಿದ್ದೇನೆ. ಸುನಂದಾ ವಸಂತನಿಗೇ ಮೀಸಲು' ಎಂದಳು ಮಂದಾಕಿನಿ.

ಜಾನಕಿ ಕಪ್ಪು ಮುಖದ ಹುಡುಗಿ. ಅವಳನ್ನೇ ವಸಂತನ ಕೊರಳಿಗೆ ಹಾಕುವದಾದರೆ ಬಂಗಾರ ಬಣ್ಣದ ಸುನಂದಾಗೆ ಹೊರಗಿನ ವರ ಹುಡುಕುವುದು ಕಷ್ಟವಾಗಲಿಕ್ಕಿಲ್ಲ— ಎಂದುಕೊಂಡ ಸುಂದರರಾಯನ ಮಾತನ್ನು ಸಂಕಲ್ಪಬದ್ಧಳಾದ ಮಂದಾಕಿನಿ ಕೇಳಲಿಲ್ಲ. 'ಇಬ್ಬರಿಗೂ ಎರಡೇ ವರುಷದ ವ್ಯತ್ಯಾಸ. ಜಾನಕಿಗಾದರೆ ಸರಿಯಾಗುತ್ತದೆ'ಂದರೆ ಮಂದಾಕಿನಿ ಸಮ್ಮತಿಸಲಿಲ್ಲ. 'ಜಾನಕಿಯನ್ನೇ ಹೊರಗೆ ಕೊಡೋಣ' ಎಂದು ಅವಳು ಹಟಹಿಡಿದಳು.

ಈ ತಂಟೆಯಲ್ಲಿ ಗಂಡ–ಹೆಂಡಿರು ಸಾಕಷ್ಟು ವಿರಸ ಮಾಡಿಕೊಂಡರು. ಜಾನಕಿ ವಸಂತನನ್ನು ಕಂಡರೆ ಛೀ–ಥೂ–ಎನ್ನುತ್ತಾಳೆ. ತಾಯಿಯನ್ನು ಮಾತ್ರ ಪ್ರೀತಿಸುತ್ತಾಳೆ. ತಂದೆಯನ್ನು ಕಂಡರೂ ಅಸಡ್ಡೆ. ಪುಣೆಯಲ್ಲಿದ್ದ ಚಿಕ್ಕಪ್ಪನೆಂದರೆ, ಚಿಕ್ಕಮ್ಮನೆಂದರೆ ಅವಳಿಗೆ ಅಚ್ಚು-ಮೆಚ್ಚು. ತನ್ನನ್ನು ವಸಂತನಿಗೆ ಕೊಡಬೇಕೆಂದು ತಂದೆ ಅಂದಾಗ ತಾಯಿಯ ಮುಂದೆ 'ತಾನಿನ್ನೂ ಕಲಿಯಬೇಕು'—ಎಂದು ತನ್ನಾಸೆ ಹೇಳಿದಳು. ಮುಂದೆ ಅಕ್ಕನಿಗೆ ವಸಂತನನ್ನು ಗೊತ್ತುಮಾಡಿ ತಂದೆ ತನಗಾಗಿ ವರ ಹುಡುಕಲು ಹೊರಟಾಗ 'ನಾವೂ ಹೆರಿಗೆಯ ಕಾರಖಾನೆಗಳಾಗಬೇಕೇ?' ಎಂದಳು. ತನ್ನ ಉದರದಿಂದ ಬಂದ ಈ ಚೋಟುದ್ದ ಹುಡುಗಿ,–ಜಾನಕಿ ಹೀಗೆಂದಳಲ್ಲಾ—ಎಂದು ತಾಯಿಯ ಮನಸ್ಸಿಗೆ ಆ ಮಾತು ನಟ್ಟಿತು. ಆದರೂ 'ತಿಳಿಯದ ಹುಡುಗಿ' ಎಂದು ಪತಿಯನ್ನು ಸಂತೈಸಿದಳು. ಹತ್ತು ಗಂಡುಗಳು ಮನೆಗೆ ನೋಡಲು ಬಂದರೆ ಐವರಿಗೆ ಇವಳು ಮುಖವನ್ನೇ ತೋರಿಸಲಿಲ್ಲ. ಇನ್ನಿಬ್ಬರು ವರಗಳು ಹಾಕಿದ ಪ್ರಶ್ನೆಗೆ ಹಿರಿಯರ ಎದುರಿಗೇ ಮರುಪ್ರಶ್ನೆ ಹಾಕಿದ್ದಳು. ಒಬ್ಬ ಚಂದದ ಹುಡುಗನಿಗೆ 'ನನ್ನ ಈ ಕಪ್ಪು ಮುಖ ನಿಮಗೆ ಒಪ್ಪಿಗೆಯೇ' ಎಂದಳು. ತಂದೆ–'ನನ್ನ ಮರ್ಯಾದೆ ಕಾಸಿಗೆ ಸಂಥೇರಾಯಿತು—.ಈ ಮಗಳಿಂದಾಗಿ'

ಎಂದರು. ಮುಂದೆ ಇವಳಿಗೆ ಮದುವೆಯೇ ಬೇಡ—ಎಂದು ಹಿರಿಯ ಮಗಳ ಮದುವೆ ಮಾಡಿಬಿಟ್ಟರು.

ಅಕ್ಕನ ಮದುವೆಯಾದಾಗ ಅವಳು ಹೈಸ್ಕೂಲು ತರಗತಿಯಲ್ಲಿ ಓದುತ್ತಿದ್ದಳು. ಅಕ್ಕ-ಅವ್ವ ಹೆರಿಗೆಗಾದಾಗ ಅವಳ ಮ್ಯಾಟ್ರಿಕ್ ಪರೀಕ್ಷೆ ಕಾದಿತ್ತು. ಶಾಲೆ ಬಿಟ್ಟುಬಿಡೆಂದರೆ ಪುಣೆಗೆ ಚಿಕ್ಕಪ್ಪನಲ್ಲಿ ಓಡಿ ಹೋಗುತ್ತೇನೆಂದಳು. ತಾಯಿ ಸ್ವಾರ್ಥಕ್ಕೋ ಪ್ರೀತಿಗೋ ಅವಳನ್ನು ಸಂಭಾಳಿಸಿಕೊಂಡು 'ನೀನು ಮ್ಯಾಟ್ರಿಕ್ ಪರೀಕ್ಷೆಗೆ ಕೂಡುವಿಯಂತೆ ಜಾನಕೀ. ನಿನ್ನ ತಾಯಿಯ ಕರ್ಮ! ಒಂದು ತಿಂಗಳು ನನ್ನ ಆರೈಕೆ ಮಾಡು. ಅಕ್ಕನದು ನೀನೇನು ಮಾಡಬೇಕಿಲ್ಲ'ವೆಂದು ರಮಿಸಿದಳು. ತಾಯಿ ಏನಿದ್ದರೂ ಅಸಹಾಯಳೆಂದು ಜಾನಕಿ ತನ್ನ ಓದನ್ನೂ ಮನೆಯ ಕೆಲಸಗಳನ್ನೂ ನಿರ್ವಹಿಸಿದಳು.

## ೨

ತನ್ನ ಮನೆಯಲ್ಲಿಯ ಹೆರಿಗೆಯ ಹಾವಳಿಯನ್ನು ಅವಳ ಗೆಳತಿಯರು ಕುಚೋದ್ಯ ಮಾಡುತ್ತಾರೆ. ತನ್ನ ಅಜ್ಜಿಯ ಮನೆಯಲ್ಲಿಯೂ ಅದೇ ಪಾಡು ಇತ್ತು ಎಂದು ಜಾನಕಿ ಕೇಳಿ ತಿಳಿದಿದ್ದಾಳೆ. ಆ ಮನೆಗಳ ಸಂತಾನವಾದ ತಾನೂ ಅದೇ ರೋಗಪರಂಪರೆಗೆ ತುತ್ತಾಗಬಾರದು—ಎಂದವಳು ಚಿಂತಿಸುತ್ತಾಳೆ. 'ನಿನಗೇನು ತಿಳಿಯುತ್ತದೆ? ಹುಚ್ಚುಹುಡುಗಿ!'–ಎಂದು ತಂದೆಯೆಂದರೆ ಮಂದಾಕಿನಿ 'ಜಾನಕಿಯ ಈ ವಯಸ್ಸಿಗೆ ನಾನು ಜಾನಕಿಯನ್ನೇ ಮರುಚಲು ಹಡೆದಿದ್ದೆ' ಎನ್ನುತ್ತಾಳೆ. ಇದನ್ನು ಕೇಳಿ ಜಾನಕಿ ತಲೆ ಕೆಡಿಸಿಕೊಂಡು ತನ್ನ ಓದುವ ಗೊಡಬಿಗೆ ನುಗ್ಗಿಬಿಡುತ್ತಾಳೆ. ಇಂಥ ಬೃಹತ್ ಸಂಸಾರದ ಮನೆಯಲ್ಲಿ ಅವಳಿಗೆ ಏಕಾಂತವಲ್ಲಿ ಕೂತು ಓದಲು ಸ್ಥಳವೇ ಇಲ್ಲ. ಬಚ್ಚಲ ಮನೆಯ ಹಾದಿ–ಹುಸಿಯೇ ಅವಳು ಓದುವ ಜಾಗ; ಅವಳು ಮಲಗುವದೂ ಅಲ್ಲಿಯೇ. ಅಲ್ಲಿ ಅವಶ್ಯಕತೆಯಿದ್ದಾಗಲಲ್ಲದೆ ಯಾರೂ ಸುಳಿಯುತ್ತಿದ್ದಿಲ್ಲ. ಅವಳಿಗೆ ಅಷ್ಟೆ ಏಕಾಂತ ಲಭ್ಯವಾಗಿತ್ತು.

ಒಂದುದಿನ ಇವಳ ಗೆಳತಿ ಶಶಿ ಇವಳ ಮನೆಗೆ ಬಂದಾಗ ಇವಳ ತಾಯಿಯನ್ನು ಕೇಳಿದಳು: 'ನಿಮ್ಮ ಎಲ್ಲಾ ಮಕ್ಕಳು ಬೆಳ್ಳಗೆ ಇದ್ದಾರೆ. ಜಾನಕಿಯೊಬ್ಬಳೇ ಹೀಗಿದ್ದಾಳಲ್ಲ—ಕಾಕೂ' ಎಂದು. ಮಂದಾಕಿನಿ ದಿನದಿನವೂ

ತಾನೇ ಹಾಕಿಕೊಳ್ಳುವ ಪ್ರಶ್ನೆಯನ್ನು ಜಾನಕಿಯ ಗೆಳತಿ ಅವಳ ಮುಂದೆಯೇ ಕೇಳಿದ್ದಳು. ಸುಂದರರಾಯ 'ಇದೊಂದು ಹೀಗಾಯಿತು–' ಎಂದು ಆಗಾಗ ಹೇಳುವುದು ವಾಡಿಕೆ. ಇವನ್ನೆಲ್ಲ ಕೇಳುವ ಜಾನಕಿ ಊರಲ್ಲಿ ಯಾರಾರ ಮನೆಯಲ್ಲಿಯ ಮಕ್ಕಳ ಮುಖಗಳನ್ನು ದಿಟ್ಟಿಸಿ ನೋಡುತ್ತಾಳೆ. ಒಂದರಂತೆ ಒಂದಿರುವದಿಲ್ಲ. ಆದರೆ ವರ್ಣ ವ್ಯತ್ಯಾಸ, ತನ್ನ ಹಾಗೂ ತನ್ನ ಅಕ್ಕ—ತಂಗಿ—ತಮ್ಮಂದಿರಿಗೆ ಇರುವಷ್ಟು ಎಲ್ಲಿಯೂ ಇಲ್ಲ.

ಅವಳ ಬೆಳೆಯುವ ಬುದ್ಧಿಯನ್ನು ಈ ಪ್ರಶ್ನೆ ಸುಪ್ತಕೀಟವಾಗಿ ಕೊರೆಯುತ್ತಲೇ ಇತ್ತು. 'ತಂದೆ ಇದೊಂದು ಹೀಗಾಯಿತು' ಎನ್ನುತ್ತಾರೆ. ತಾಯಿ 'ನನ್ನ ಕರ್ಮ' ಎನ್ನುತ್ತಾಳೆ. ಇದು—ತನ್ನ ಮೈಬಣ್ಣದ ಕಪ್ಪು ಅವಳ ಕರ್ಮವೇಕೆ? ಲೋಕದಲ್ಲಿ ಎಷ್ಟು ಕಪ್ಪು ಮೈಯವರಿಲ್ಲ? ಅದು ಲೋಕದ ಕರ್ಮವೇನು?

ಬಣ್ಣದಲ್ಲೇನು ವಿಶೇಷ? ಶಾಲೆಯ ವಾರ್ಷಿಕೋತ್ಸವದಲ್ಲಿ ಜಾನಕಿ ಬಣ್ಣ ಬಳಿದುಕೊಂಡು ನಾಯಕಿಯ ಪಾತ್ರ ಅಭಿನಯಿಸಿದ್ದನ್ನು ಅವಳ ಸಹಪಾಠಿಗಳು ಇಂದಿಗೂ ಆಡಿಕೊಳ್ಳುತ್ತಾರೆ. ಅವಳು ಚಲುವೆ. ಮೂಗು, ಬಾಯಿ, ದಂತಪಂಕ್ತಿ, ಗದ್ದ–ತುಟಿ, ಹುಬ್ಬು–ಹಣೆ ಎಲ್ಲಾ ಅವಳಿಗೆ ಒಪ್ಪವಾಗಿಯೇ ಇವೆ. ತೆಳುವಾಗಿ ಹುಡಿ ಸವರಿಕೊಂಡು ಬಿಡುಮುಡಿಗಳನ್ನು ಎರಡೂ ಬದಿಗೆ ಜೋಲಿಸುತ್ತ ಅಚಂಚಲ ದೃಷ್ಟಿಯ ಈ ಜಾನಕಿ ದರ್ಪದಿಂದ ಹೆಜ್ಜೆಹಾಕಿ ಹೊರಟಾಗ ದಾರಿಹೋಕರು ದಾಟಿ ಹೋಗಿ ಒಮ್ಮೆ ತಿರುಗಿ ಇವಳತ್ತ ನೋಡುತ್ತಾರೆ. ಮನೆಯಲ್ಲಿ ತಂದೆ ಅವಳನ್ನು ಹಿಂದೆ ಆಡಿಕೊಳ್ಳುತ್ತಾರೆ. ಮುಂದೆ ಆಡಿದ ಮಾತಿಗೆ ಅವಳಿಂದ ಏನು ಕೇಳಬೇಕಾದೀತೋ—ಎಂದು ಅವರಿಗೆ ಗಾಬರಿ. ವಸಂತ ಇವಳೆದಿರು ಹಾಯುವದೇ ಇಲ್ಲ. ಅಕ್ಕ ಬಸಿರಿಯಾಗಿ ಬಂದಾಗ ಜಾನಕಿ ಅವಳನ್ನಪ್ಪಿಕೊಂಡು 'ಅಜ್ಜ–ಅಪ್ಪರಂತೆ ನೀನೂ ಕಾರಖಾನೆಯಾದೆಯಲ್ಲ ಅಕ್ಕ,–ಎಂದು' ಅತ್ತುಬಿಟ್ಟಳು. "ಕಾರಖಾನೆ!"—ಯಾರು ಅವಳಿಗೆ ಹೇಳಿಕೊಟ್ಟ ಶಬ್ದವೋ ಅದು!

ಜಾನಕಿ ಬರುತ್ತೇನೆಂದು ಚಿಕ್ಕಪ್ಪನಿಗೆ ಕಾಗದ ಬರೆದಳು. 'ಬರಲಿ, ಮನೆಯಲ್ಲಿ ನಿನಗೆ ಜೋಡಾಗುತ್ತಾಳೆ. ನಮಗೆ ಯಾರಿದ್ದಾರೆ?' ಎಂದು ಆತ ಅಂದರೆ 'ಮದುವೆಯಾಗದ ಹುಡುಗಿ, ಜಾನಕಿ ಸಂಕೋಚವನ್ನೇ

ಅರಿಯದವಳು. ಪುಣೆ ಮಂಗನಂಥ ಊರು. ನೋಡಿರಿ, ನಿಮ್ಮ ಇಷ್ಟ. ನನಗೇನು ಅವಳು ಬೇಡವೆಂದಿಲ್ಲ. ನಿಮಗೆ ಅಣ್ಣನ ಮಗಳಾದರೆ, ನನಗೆ ಅಕ್ಕನ ಮಗಳು' ಎಂದಳು ಕುಂದಾ.

ಜಾನಕಿ, ಅಕ್ಕ-ಅವ್ವ ಇಬ್ಬರ ಬಾಣಂತಿತನ ಮಾಡಿಯೂ ಮ್ಯಾಟ್ರಿಕ್ ಪಾಸಾದಳು. 'ಕಾಲೇಜಿಗೆ ಬೇಡವೇ ಬೇಡ—ನನಗೆ ಸಾಧ್ಯವಿಲ್ಲ'—ಎಂದು ತಂದೆ ಹೇಳಿದಾಗ 'ನನ್ನ ಮದುವೆಯ ವೆಚ್ಚ ನೀವು ಮಾಡಬೇಕಿಲ್ಲ. ಅದನ್ನೇ ಕೊಟ್ಟು ನನಗೆ ಕಾಲೇಜು ಓದಿಸು. ನಾನು ಮೆಡಿಕಲ್ ಓದಬೇಕು' ಎಂದಳು.

ಸುಂದರರಾಯ ಪಿತ್ರಾರ್ಜಿತವನ್ನು ಮದುವೆಗಳಿಗೆ ತೆಗೆದಿಟ್ಟು ತನ್ನ ದುಡಿಮೆಯಿಂದ ದಿನ ಹಾಕುತ್ತಿದ್ದ. ಬೆಳೆದ ಮಗಳು ಜಾನಕಿ ಏನು ಕೇಳಿದರೂ ತರ್ಕಬದ್ಧವಾಗಿಯೇ ಇರುವುದರಿಂದ ಸುಂದರರಾಯನ ಬಾಯಿ ಕಟ್ಟುತ್ತಿತ್ತು. ಒಮ್ಮೆ ಶ್ರೀಪತಿ ಪುಣೆಯಿಂದ ಬಂದಾಗ ಮಗಳ ಅಭಿಪ್ರಾಯ ಹೇಳಿದ. "ಹೌದು; ಅವಳನ್ನು ಓದಿಸಬೇಕು. ಗಂಡುಮಕ್ಕಳನ್ನು ಓದಿಸುವದಿಲ್ಲವೇ? ಅವಳೇನು ತಪ್ಪು ಮಾಡಿದ್ದಾಳೆ?" ಎಂದ ಶ್ರೀಪತಿ.

"ಅವಳು ಹುಟ್ಟಿದ್ದು, ಬೆಳೆದದ್ದು ನನ್ನದೇ ತಪ್ಪು ಶ್ರೀಪತಿ."

"ಯಾಕೆ ಅಣ್ಣ ಇಂಥ ಮಾತು? ಉಳಿದವರು ಹುಟ್ಟಿಲ್ಲವೇ? ಬೆಳೆದಿಲ್ಲವೇ?"

"ಹೌದು; ಆದರೆ ಜಾನಕಿ ಬೇರೆ."

"ಬಣ್ಣ ಹೌದಲ್ಲೋ?"

"ಅದೊಂದೇ ಅಂದಿದ್ದೆ. ಈಗ ನೋಡುವಾಗ ಬುದ್ಧಿಯೂ ಬೇರೆ—ಅದು-ಅವಳ ಬುದ್ಧಿ-ಸದಾ ಜಾಗ್ರತ. ಅವಳು ಯಾರನ್ನೂ ತನ್ನೆದಿರು ನಿಲ್ಲಗೊಡುವದಿಲ್ಲ—ಶ್ರೀಪತಿ. ತನ್ನದೇ ತನಗೆ. ಅವಳ ಹಟದ ಮುಂದೆ ನಾನು ನಡಗುತ್ತೇನೆ—ನೋಡು."

"ಯಾವ ಹಟ ಅಣ್ಣ? ಕಲಿಯುತ್ತೇನೆ ಅನ್ನುತ್ತಾಳೆ; ಅದೇ ಅಷ್ಟೆ."

"ಅದು ಮಾತ್ರವಲ್ಲ. ನಿನಗೆ ತಿಳಿಯದು ಶ್ರೀಪತಿ, ಹುಟ್ಟಾ ಹಟವಾದಿ ಅವಳು."

"ಯಾಕೆ ಇಷ್ಟು ಮಾತು ಅಣ್ಣ? ಅವಳನ್ನು ಕಳಿಸಿಬಿಡು. ನಾನು ಪುಣೆಯಲ್ಲಿ ಅವಳನ್ನು ಓದಿಸಿ ಡಾಕ್ಟರ್ತಿಯನ್ನು ಮಾಡಿಸುತ್ತೇನೆ."

" ಬೇಡ ಶ್ರೀಪತಿ, ಅಷ್ಟುದ್ದ ನೀರಿಗೆ ಅವಳು ಇಳಿಯುವದು ಬೇಡ. ಒಂದು ಮದುವೆ ಮಾಡಿಬಿಡು. "

" ಅವಳೂ ಗಂಡು ಮಗುವೆಂದೇ ತಿಳಿ ಅಣ್ಣ. ಓದಿಸು. "

" ತಿಳಿಯುವದೇನು ? ಅವಳು ಇದ್ದೇ ಇದ್ದಾಳೆ. ನೀನು ಆಗಲಿ— ಎಂದರೆ ಕರಕೊಂಡು ಹೋಗು. ಅವಳಿಗೆ ನಿಜವಾಗಿ ನಾನು ಹೆದರುತ್ತೇನೆ ಶ್ರೀಪತಿ. "

—ಜಾನಕಿ ಅಲ್ಲಿಗೇ ಓಡುತ್ತ ಬಂದವಳು:

" ಚಿಕ್ಕಪ್ಪ, ಏನಾಯಿತು ನಾನು ಪುಣೆಗೆ ಬರುವುದು ? " ಎಂದಳು.

" ಬಾ, ಜಾನಕೀ " ಎಂದ ಶ್ರೀಪತಿ.

" ಹೋಗಿ ಬಾ ಮಗಳೇ " ಎಂದ ಸುಂದರರಾಯ.

## ೩

ಜಾನಕಿ ಪುಣೆಗೆ ಬಂದು ಚಿಕ್ಕಪ್ಪನ ಮನೆಯಲ್ಲಿ ಇಂಟರ್ ಸಾಯನ್ಸ ಮುಗಿಸಿ ಈಗ ಮೆಡಿಕಲ್ ಕಾಲೇಜಿನ ಹಾಸ್ಟೆಲಿನಲ್ಲೇ ಇದ್ದಾಳೆ. ಅವಳಿಗೆ ಪಾಠದಲ್ಲಾಗಲಿ, ಹೊರಗಾಗಲೀ ಸೋಲೆಂಬುದಿಲ್ಲ. ದುರ್ವಾರವಾದ ಚೇತನ ಅವಳನ್ನು ಮುನ್ನಡೆಸುತ್ತಿದೆ. ಅವಳಿಗೆ ಪಾಠಗಳಿಗಿಂತ ಪ್ರಾತ್ಯಕ್ಷಿಕೆಗಳ ಮೇಲೆ ಹುಚ್ಚು. ಅವಳು ಅಂಥ ಪ್ರಾತ್ಯಕ್ಷಿಕೆಗಳ ವರದಿಗಳನ್ನೇ ಹೆಚ್ಚಾಗಿ ಓದುತ್ತಾಳೆ. ಓದಿ ಚಿಂತಿಸುತ್ತಾಳೆ. ಸಾಧ್ಯಾಸಾಧ್ಯತೆಗಳನ್ನು ತನ್ನ ಪರಿಮಿತ ಕ್ಷೇತ್ರದಲ್ಲಿ ಕಾಣಲೆಳಸುತ್ತಾಳೆ. ಅವಳಿಗೆ ಜನನ ರಹಸ್ಯದ ಮೇಲೆ, ಸ್ವಭಾವದ ಬೆಳವಣಿಗೆಯ ಮೇಲೆ ಹೆಚ್ಚಿನ ಆಸ್ಥೆ. ಅದೇ ವಿಷಯದ ಚರ್ಚೆಯನ್ನು ತನ್ನ ಪ್ರಾಧ್ಯಾಪಕರ ಕೂಡ, ಸಹಪಾಠಿಗಳ ಕೂಡ ಅವಳಿಗೆ ಮಾಡಿದಷ್ಟೂ ತೃಪ್ತಿಯಿಲ್ಲ. ಒಬ್ಬ ವೃದ್ಧ ಡಾಕ್ಟರನಲ್ಲಿ ಒಮ್ಮೆ ಚರ್ಚೆ ಗಿಳಿದಳು. ಹುಡುಗಿಯ ಆಸೆ-ಆಕಾಂಕ್ಷೆಗಳೇನಿರಬೇಕೆಂದು ಅವನು ಪರೀಕ್ಷಿಸತೊಡಗಿದ. ಅವನಿಗೆ ಅದು ವಿದಿತವಾಗಲಿಲ್ಲ. ಅವಳು ಯಾವಲ್ಲಿಯೋ ಜಾರಿದ್ದಾಳೆ; ಏನೋ ತೊಂದರೆಯಲ್ಲಿದ್ದಾಳೆಂದು ಅವನೆಣಿಸಿದ. ಅವಳಿಂದಲೇ ಅದನ್ನು ಹೊರಡಿಸಬೇಕೆಂಬ ಯತ್ನದಲ್ಲಿ ದಾರಿತಪ್ಪಿ ಅವಳ ಆಕರ್ಷಣೆಗೊಳಗಾದ; ಅದೂ ಲೆಕ್ಕ ತಪ್ಪಿಯೇ. ಮುಂದೆ ಅವನು ಈ

ಅರಿಯದವಳು. ಪುಣೆ ಮುಂಗನಂಥ ಊರು. ನೋಡಿರಿ, ನಿಮ್ಮ ಇಷ್ಟ. ನನಗೇನು ಅವಳು ಬೇಡವೆಂದಿಲ್ಲ. ನಿಮಗೆ ಅಣ್ಣನ ಮಗಳಾದರೆ, ನನಗೆ ಅಕ್ಕನ ಮಗಳು' ಎಂದಳು ಕುಂದಾ.

ಜಾನಕಿ, ಅಕ್ಕ-ಅವ್ವ ಇಬ್ಬರ ಬಾಣಂತಿತನ ಮಾಡಿಯೂ ಮ್ಯಾಟ್ರಿಕ್ ಪಾಸಾದಳು. 'ಕಾಲೇಜಿಗೆ ಬೇಡವೇ ಬೇಡ—ನನಗೆ ಸಾಧ್ಯವಿಲ್ಲ'—ಎಂದು ತಂದೆ ಹೇಳಿದಾಗ 'ನನ್ನ ಮದುವೆಯ ವೆಚ್ಚ ನೀವು ಮಾಡಬೇಕಿಲ್ಲ. ಅದನ್ನೇ ಕೊಟ್ಟು ನನಗೆ ಕಾಲೇಜು ಓದಿಸು. ನಾನು ಮೆಡಿಕಲ್ ಓದಬೇಕು' ಎಂದಳು.

ಸುಂದರರಾಯ ಪಿತ್ರಾರ್ಜಿತವನ್ನು ಮದುವೆಗಳಿಗೆ ತೆಗೆದಿಟ್ಟು ತನ್ನ ದುಡಿಮೆಯಿಂದ ದಿನ ಹಾಕುತ್ತಿದ್ದ. ಬೆಳೆದ ಮಗಳು ಜಾನಕಿ ಏನು ಕೇಳಿದರೂ ತರ್ಕಬದ್ಧವಾಗಿಯೇ ಇರುವುದರಿಂದ ಸುಂದರರಾಯನ ಬಾಯಿ ಕಟ್ಟುತ್ತಿತ್ತು. ಒಮ್ಮೆ ಶ್ರೀಪತಿ ಪುಣೆಯಿಂದ ಬಂದಾಗ ಮಗಳ ಅಭಿಪ್ರಾಯ ಹೇಳಿದ. "ಹೌದು; ಅವಳನ್ನು ಓದಿಸಬೇಕು. ಗಂಡುಮಕ್ಕಳನ್ನು ಓದಿಸುವದಿಲ್ಲವೇ? ಅವಳೇನು ತಪ್ಪು ಮಾಡಿದ್ದಾಳೆ?" ಎಂದ ಶ್ರೀಪತಿ.

"ಅವಳು ಹುಟ್ಟಿದ್ದು, ಬೆಳೆದದ್ದು ನನ್ನದೇ ತಪ್ಪು ಶ್ರೀಪತಿ."

"ಯಾಕೆ ಅಣ್ಣ ಇಂಥ ಮಾತು? ಉಳಿದವರು ಹುಟ್ಟಿಲ್ಲವೇ? ಬೆಳೆದಿಲ್ಲವೇ?"

"ಹೌದು; ಆದರೆ ಜಾನಕಿ ಬೇರೆ."

"ಬಣ್ಣ ಹೌದಲ್ಲೋ?"

"ಅದೊಂದೇ ಅಂದಿದ್ದೆ. ಈಗ ನೋಡುವಾಗ ಬುದ್ಧಿಯೂ ಬೇರೆ—ಅದು–ಅವಳ ಬುದ್ಧಿ–ಸದಾ ಜಾಗ್ರತ. ಅವಳು ಯಾರನ್ನೂ ತನ್ನಿದಿರು ನಿಲ್ಲಗೊಡುವದಿಲ್ಲ—ಶ್ರೀಪತಿ. ತನ್ನದೇ ತನಗೆ. ಅವಳ ಹಟದ ಮುಂದೆ ನಾನು ನಡಗುತ್ತೇನೆ—ನೋಡು."

"ಯಾವ ಹಟ ಅಣ್ಣ? ಕಲಿಯುತ್ತೇನೆ ಅನ್ನುತ್ತಾಳೆ; ಅದೇ ಅಷ್ಟೆ."

"ಅದು ಮಾತ್ರವಲ್ಲ. ನಿನಗೆ ತಿಳಿಯದು ಶ್ರೀಪತಿ, ಹುಟ್ಟಾ ಹಟವಾದಿ ಅವಳು."

"ಯಾಕೆ ಇಷ್ಟು ಮಾತು ಅಣ್ಣ? ಅವಳನ್ನು ಕಳಿಸಿಬಿಡು. ನಾನು ಪುಣೆಯಲ್ಲಿ ಅವಳನ್ನು ಓದಿಸಿ ಡಾಕ್ಟರ್ತಿಯನ್ನು ಮಾಡಿಸುತ್ತೇನೆ."

" ಬೇಡ ಶ್ರೀಪತಿ, ಅಷ್ಟುದ್ದ ನೀರಿಗೆ ಅವಳು ಇಳಿಯುವದು ಬೇಡ. ಒಂದು ಮದುವೆ ಮಾಡಿಬಿಡು. "

" ಅವಳೂ ಗಂಡು ಮಗುವೆಂದೇ ತಿಳಿ ಅಣ್ಣ, ಓದಿಸು. "

" ತಿಳಿಯುವದೇನು ? ಅವಳು ಇದ್ದೇ ಇದ್ದಾಳೆ. ನೀನು ಆಗಲಿ— ಎಂದರೆ ಕರಕೊಂಡು ಹೋಗು. ಅವಳಿಗೆ ನಿಜವಾಗಿ ನಾನು ಹೆದರುತ್ತೇನೆ ಶ್ರೀಪತಿ. "

—ಜಾನಕಿ ಅಲ್ಲಿಗೇ ಓಡುತ್ತ ಬಂದವಳು:

" ಚಿಕ್ಕಪ್ಪ, ಏನಾಯಿತು ನಾನು ಪುಣೆಗೆ ಬರುವುದು ? " ಎಂದಳು.

" ಬಾ, ಜಾನಕೀ " ಎಂದ ಶ್ರೀಪತಿ.

" ಹೋಗಿ ಬಾ ಮಗಳೇ " ಎಂದ ಸುಂದರರಾಯ.

೩

ಜಾನಕಿ ಪುಣೆಗೆ ಬಂದು ಚಿಕ್ಕಪ್ಪನ ಮನೆಯಲ್ಲಿ ಇಂಟರ್ ಸಾಯನ್ಸ ಮುಗಿಸಿ ಈಗ ಮೆಡಿಕಲ್ ಕಾಲೇಜಿನ ಹಾಸ್ಟೆಲಿನಲ್ಲೇ ಇದ್ದಾಳೆ. ಅವಳಿಗೆ ಪಾಠದಲ್ಲಾಗಲಿ, ಹೊರಗಾಗಲೀ ಸೋಲೆಂಬುದಿಲ್ಲ. ದುರ್ವಾರವಾದ ಚೇತನ ಅವಳನ್ನು ಮುನ್ನಡೆಸುತ್ತಿದೆ. ಅವಳಿಗೆ ಪಾಠಗಳಿಗಿಂತ ಪ್ರಾತ್ಯಕ್ಷಿಕೆಗಳ ಮೇಲೆ ಹುಚ್ಚು. ಅವಳು ಅಂಥ ಪ್ರಾತ್ಯಕ್ಷಿಕೆಗಳ ವರದಿಗಳನ್ನೇ ಹೆಚ್ಚಾಗಿ ಓದುತ್ತಾಳೆ. ಓದಿ ಚಿಂತಿಸುತ್ತಾಳೆ. ಸಾಧ್ಯಾಸಾಧ್ಯತೆಗಳನ್ನು ತನ್ನ ಪರಿಮಿತ ಕ್ಷೇತ್ರದಲ್ಲಿ ಕಾಣಲೆಳಸುತ್ತಾಳೆ. ಅವಳಿಗೆ ಜನನ ರಹಸ್ಯದ ಮೇಲೆ, ಸ್ವಭಾವದ ಬೆಳವಣಿಗೆಯ ಮೇಲೆ ಹೆಚ್ಚಿನ ಆಸ್ಥೆ. ಅದೇ ವಿಷಯದ ಚರ್ಚೆಯನ್ನು ತನ್ನ ಪ್ರಾಧ್ಯಾಪಕರ ಕೂಡ, ಸಹಪಾಠಿಗಳ ಕೂಡ ಅವಳಿಗೆ ಮಾಡಿದಷ್ಟೂ ತೃಪ್ತಿಯಿಲ್ಲ. ಒಬ್ಬ ವೃದ್ಧ ಡಾಕ್ಟರನಲ್ಲಿ ಒಮ್ಮೆ ಚರ್ಚೆಗಿಳಿದಳು. ಹುಡುಗಿಯ ಆಸೆ-ಆಕಾಂಕ್ಷೆಗಳೇನಿರಬೇಕೆಂದು ಅವನು ಪರೀಕ್ಷಿಸತೊಡಗಿದ. ಅವನಿಗೆ ಅದು ವಿದಿತವಾಗಲಿಲ್ಲ. ಅವಳು ಯಾವಲ್ಲಿಯೋ ಜಾರಿದ್ದಾಳೆ; ಏನೋ ತೊಂದರೆಯಲ್ಲಿದ್ದಾಳೆಂದು ಅವನೆಣಿಸಿದ. ಅವಳಿಂದಲೇ ಅದನ್ನು ಹೊರಡಿಸಬೇಕೆಂಬ ಯತ್ನದಲ್ಲಿ ದಾರಿತಪ್ಪಿ ಅವಳ ಆಕರ್ಷಣೆಗೊಳಗಾದ; ಅದೂ ಲೆಕ್ಕ ತಪ್ಪಿಯೇ. ಮುಂದೆ ಅವನು ಈ

ಅರಿಯದವಳು. ಪುಣೆ ಮಂಗಸಂಥ ಊರು. ನೋಡಿರಿ, ನಿಮ್ಮ ಇಷ್ಟ. ನನಗೇನು ಅವಳು ಬೇಡವೆಂದಿಲ್ಲ. ನಿಮಗೆ ಅಣ್ಣನ ಮಗಳಾದರೆ, ನನಗೆ ಅಕ್ಕನ ಮಗಳು' ಎಂದಳು ಕುಂದಾ.

ಜಾನಕಿ, ಅಕ್ಕ-ಅವ್ವ ಇಬ್ಬರ ಬಾಣಂತಿತನ ಮಾಡಿಯೂ ಮ್ಯಾಟ್ರಿಕ್ ಪಾಸಾದಳು. 'ಕಾಲೇಜಿಗೆ ಬೇಡವೇ ಬೇಡ—ನನಗೆ ಸಾಧ್ಯವಿಲ್ಲ'—ಎಂದು ತಂದೆ ಹೇಳಿದಾಗ 'ನನ್ನ ಮದುವೆಯ ವೆಚ್ಚ ನೀವು ಮಾಡಬೇಕಿಲ್ಲ. ಅದನ್ನೇ ಕೊಟ್ಟು ನನಗೆ ಕಾಲೇಜು ಓದಿಸು. ನಾನು ಮೆಡಿಕಲ್ ಓದಬೇಕು' ಎಂದಳು.

ಸುಂದರರಾಯ ಪಿತ್ರಾರ್ಜಿತವನ್ನು ಮದುವೆಗಳಿಗೆ ತೆಗೆದಿಟ್ಟು ತನ್ನ ದುಡಿಮೆಯಿಂದ ದಿನ ಹಾಕುತ್ತಿದ್ದ. ಬೆಳೆದ ಮಗಳು ಜಾನಕಿ ಏನು ಕೇಳಿದರೂ ತರ್ಕಬದ್ಧವಾಗಿಯೇ ಇರುವುದರಿಂದ ಸುಂದರರಾಯನ ಬಾಯಿ ಕಟ್ಟುತ್ತಿತ್ತು. ಒಮ್ಮೆ ಶ್ರೀಪತಿ ಪುಣೆಯಿಂದ ಬಂದಾಗ ಮಗಳ ಅಭಿಪ್ರಾಯ ಹೇಳಿದ. "ಹೌದು; ಅವಳನ್ನು ಓದಿಸಬೇಕು. ಗಂಡುಮಕ್ಕಳನ್ನು ಓದಿಸುವದಿಲ್ಲವೇ ? ಅವಳೇನು ತಪ್ಪು ಮಾಡಿದ್ದಾಳೆ ? " ಎಂದ ಶ್ರೀಪತಿ.

"ಅವಳು ಹುಟ್ಟಿದ್ದು, ಬೆಳೆದದ್ದು ನನ್ನದೇ ತಪ್ಪು ಶ್ರೀಪತಿ."

"ಯಾಕೆ ಅಣ್ಣ ಇಂಥ ಮಾತು ? ಉಳಿದವರು ಹುಟ್ಟಿಲ್ಲವೇ ? ಬೆಳೆದಿಲ್ಲವೇ ?"

"ಹೌದು; ಆದರೆ ಜಾನಕಿ ಬೇರೆ."

"ಬಣ್ಣ ಹೌದಲ್ಲೋ ? "

"ಅದೊಂದೇ ಅಂದಿದ್ದೆ. ಈಗ ನೋಡುವಾಗ ಬುದ್ಧಿಯೂ ಬೇರೆ—ಅದು—ಅವಳ ಬುದ್ಧಿ—ಸದಾ ಜಾಗ್ರತ. ಅವಳು ಯಾರನ್ನೂ ತನ್ನಿದಿರು ನಿಲ್ಲಗೊಡುವದಿಲ್ಲ—ಶ್ರೀಪತಿ. ತನ್ನದೇ ತನಗೆ. ಅವಳ ಹಟದ ಮುಂದೆ ನಾನು ನಡಗುತ್ತೇನೆ—ನೋಡು."

"ಯಾವ ಹಟ ಅಣ್ಣ? ಕಲಿಯುತ್ತೇನೆ ಅನ್ನುತ್ತಾಳೆ; ಅದೇ ಅಷ್ಟೆ."

"ಅದು ಮಾತ್ರವಲ್ಲ. ನಿನಗೆ ತಿಳಿಯದು ಶ್ರೀಪತಿ, ಹುಟ್ಟಾ ಹಟವಾದಿ ಅವಳು."

"ಯಾಕೆ ಇಷ್ಟು ಮಾತು ಅಣ್ಣ ? ಅವಳನ್ನು ಕಳಿಸಿಬಿಡು. ನಾನು ಪುಣೆಯಲ್ಲಿ ಅವಳನ್ನು ಓದಿಸಿ ಡಾಕ್ಟರ್ತಿಯನ್ನು ಮಾಡಿಸುತ್ತೇನೆ."

" ಬೇಡ ಶ್ರೀಪತಿ, ಅಷ್ಟುದ್ದ ನೀರಿಗೆ ಅವಳು ಇಳಿಯುವದು ಬೇಡ. ಒಂದು ಮದುವೆ ಮಾಡಿಬಿಡು. "

" ಅವಳೂ ಗಂಡು ಮಗುವೆಂದೇ ತಿಳಿ ಅಣ್ಣ. ಓದಿಸು. "

" ತಿಳಿಯುವದೇನು ? ಅವಳು ಇದ್ದೇ ಇದ್ದಾಳೆ. ನೀನು ಆಗಲಿ— ಎಂದರೆ ಕರಕೊಂಡು ಹೋಗು. ಅವಳಿಗೆ ನಿಜವಾಗಿ ನಾನು ಹೆದರುತ್ತೇನೆ ಶ್ರೀಪತಿ. "

—ಜಾನಕಿ ಅಲ್ಲಿಗೇ ಓಡುತ್ತ ಬಂದವಳು:

" ಚಿಕ್ಕಪ್ಪ, ಏನಾಯಿತು ನಾನು ಪುಣೆಗೆ ಬರುವುದು ? " ಎಂದಳು.

" ಬಾ, ಜಾನಕೀ " ಎಂದ ಶ್ರೀಪತಿ.

" ಹೋಗಿ ಬಾ ಮಗಳೇ " ಎಂದ ಸುಂದರರಾಯ.

## ೩

ಜಾನಕಿ ಪುಣೆಗೆ ಬಂದು ಚಿಕ್ಕಪ್ಪನ ಮನೆಯಲ್ಲಿ ಇಂಟರ್ ಸಾಯನ್ಸ ಮುಗಿಸಿ ಈಗ ಮೆಡಿಕಲ್ ಕಾಲೇಜಿನ ಹಾಸ್ಟೆಲಿನಲ್ಲೇ ಇದ್ದಾಳೆ. ಅವಳಿಗೆ ಪಾಠದಲ್ಲಾಗಲಿ, ಹೊರಗಾಗಲೀ ಸೋಲೆಂಬುದಿಲ್ಲ. ದುರ್ವಾರವಾದ ಚೇತನ ಅವಳನ್ನು ಮುನ್ನಡೆಸುತ್ತಿದೆ. ಅವಳಿಗೆ ಪಾಠಗಳಿಗಿಂತ ಪ್ರಾತ್ಯ ಕ್ಷಿಕೆಗಳ ಮೇಲೆ ಹುಚ್ಚು. ಅವಳು ಅಂಥ ಪ್ರಾತ್ಯಕ್ಷಿಕೆಗಳ ವರದಿಗಳನ್ನೇ ಹೆಚ್ಚಾಗಿ ಓದುತ್ತಾಳೆ. ಓದಿ ಚಿಂತಿಸುತ್ತಾಳೆ. ಸಾಧ್ಯಾಸಾಧ್ಯತೆಗಳನ್ನು ತನ್ನ ಪರಿಮಿತ ಕ್ಷೇತ್ರದಲ್ಲಿ ಕಾಣಲೆಳಸುತ್ತಾಳೆ. ಅವಳಿಗೆ ಜನನ ರಹಸ್ಯದ ಮೇಲೆ, ಸ್ವಭಾವದ ಬೆಳವಣಿಗೆಯ ಮೇಲೆ ಹೆಚ್ಚಿನ ಆಸ್ಥೆ. ಅದೇ ವಿಷಯದ ಚರ್ಚೆಯನ್ನು ತನ್ನ ಪ್ರಾಧ್ಯಾಪಕರ ಕೂಡ, ಸಹಪಾಠಿಗಳ ಕೂಡ ಅವಳಿಗೆ ಮಾಡಿದಷ್ಟೂ ತೃಪ್ತಿಯಿಲ್ಲ. ಒಬ್ಬ ವೃದ್ಧ ಡಾಕ್ಟರನಲ್ಲಿ ಒಮ್ಮೆ ಚರ್ಚೆ ಗಿಳಿದಳು. ಹುಡುಗಿಯ ಆಸೆ-ಆಕಾಂಕ್ಷೆಗಳೇನಿರಬೇಕೆಂದು ಅವನು ಪರೀ ಕ್ಷಿಸತೊಡಗಿದ. ಅವನಿಗೆ ಅದು ವಿದಿತವಾಗಲಿಲ್ಲ. ಅವಳು ಯಾವಲ್ಲಿಯೋ ಜಾರಿದ್ದಾಳೆ; ಏನೋ ತೊಂದರೆಯಲ್ಲಿದ್ದಾಳೆಂದು ಅವನೆಣಿಸಿದ. ಅವ ಳಿಂದಲೇ ಅದನ್ನು ಹೊರಡಿಸಬೇಕೆಂಬ ಯತ್ನದಲ್ಲಿ ದಾರಿತಪ್ಪಿ ಅವಳ ಆಕರ್ಷಣೆಗೊಳಗಾದ; ಅದೂ ಲೆಕ್ಕ ತಪ್ಪಿಯೇ. ಮುಂದೆ ಅವನು ಈ

ವರೆಗೆ ನೋಡಿ, ಓದಿ, ಕೇಳಿ ಅರಿಯದ ಪಾಠವನ್ನು ಅವಳಿಂದ ಕಲಿಯು ಬೇಕಾಯಿತು.

ಅವಳ ಕಾಲೇಜಿನ ಸಹಪಾಠಿಗಳಿಗೂ ಇವಳೊಂದು ದೊಡ್ಡ ಸಮಸ್ಯೆ. ಆರೋಗ್ಯವಂತಳಾದ ಜಾನಕಿ ಸಾದಾ—ಆದರೂ ವ್ಯವಸ್ಥಿತವಾಗಿ ಬಟ್ಟೆ-ಬರೆ ಉಟ್ಟು-ತೊಟ್ಟು ತಿರುಗುತ್ತಾಳೆ. ನಡೆಯಲ್ಲಿ, ನುಡಿಯಲ್ಲಿ ಬಿಗುವಿಲ್ಲ; ಆದರೆ ದಿಟ್ಟತನ. ಹಾಗೆಂದು ವಾಚಾಳಿಯಲ್ಲ. ಮೆಚ್ಚಿದರೆ ಮುಕ್ತಹಾಸ. ತಾನು ಮೆಚ್ಚದ್ದು ಇದ್ದರೆ ಅಸಡ್ಡೆ ಮಾಡಿ ಬಿಡುತ್ತಾಳೆ. ಸಹಪಾಠಿಗಳಿಗೆ ಇವಳ ನಗೆಯೂ ಅಸಡ್ಡೆಯೂ ತಿಳಿಯದೆ ಅನೇಕ ಬಾರಿ ಒದೆತ ತಿಂದಿದ್ದಾರೆ. ಅವಳಿಗೆ ಮುಖ ಮರೆಸಿ ತಿರುಗಬೇಕಾಗಿದೆ—ಕೆಲವರಿಗೆ.

ಜಾನಕಿಗೆ ಅಂತಃಕರಣವಿಲ್ಲವೇ? ಆಸೆ-ಆಕಾಂಕ್ಷೆಗಳಿಲ್ಲವೇ ? ಸಹ ಪಾಠಿಗಳ ಸೆಳೆತವಿಲ್ಲವೇ ? ತಿಳಿಯುವದೇ ಕಷ್ಟ. ಆದರೆ ಬಹುಶಃ ಎಲ್ಲ ಸಹಪಾಠಿಗಳು, ಪ್ರಾಧ್ಯಾಪಕರು ಅವಳ ವ್ಯಕ್ತಿತ್ವಕ್ಕೆ ಮಣಿದಿದ್ದಾರೆ. ಅವಳಿಂದ ಮೆಚ್ಚಿಕೆ ಪಡೆಯುವದೊಂದು ಹವ್ಯಾಸ. ಈ ಪೈಪೋಟಿಯ ಪರಿಣಾಮ ಮಾತ್ರ ಯಾರೂ ನಿರ್ಧರಿಸಿ ಹೇಳಲಾರರು.

ಜಾನಕಿ ತನ್ನ ಪರೀಕ್ಷೆಗಳಲ್ಲಿ ಮೇಲಿನ ಮಟ್ಟದಲ್ಲಿ ತೇರ್ಗಡೆಹೊಂದುತ್ತ ವಿದ್ಯಾರ್ಥಿ ವೇತನ ಪಡೆದು ತನ್ನ ಕಾಲಮೇಲೇ ನಿಂತು ಕೊನೆಯ ತರಗತಿಗೆ ಬಂದಿದ್ದಾಳೆ.

ರಜೆಗೆ ತಾಯಿ-ತಂದೆಯರ ಬಳಿ ಈ ನಾಲ್ಕು ವರುಷಗಳಲ್ಲಿ ಅವಳು ಬಂದದ್ದು ಎರಡೇ ಬಾರಿ. ಇವಳನ್ನು ಕಂಡ ತಾಯಿಗೆ ಒಂದು ಬಗೆಯ ಸಂತೋಷ; ಒಂದು ಬಗೆಯ ಸಂಕೋಚ. ಅವಳಿಗೂ ಏನೋ ಒಂದು ಬಗೆಯ ಚಿಂತೆ ಕಾಡುತ್ತಿದೆಯೆಂದು ಅವಳ ಅಲಕ್ಷಿತ ನಡೆನುಡಿಯಿಂದ ಅರಿತ ತಾಯಿ ಅದನ್ನು ತಿಳಿಯಬಯಸುತ್ತಾಳೆ. ಆದರೆ ಅವಳನ್ನು ಕೇಳಲಾಗದ ಸಂಕೋಚ. ಹರೆಯದ ಹುಡುಗಿ, ಕಲಿತವಳು. ತನ್ನ ಗುಟ್ಟನ್ನು ತಾಯಿಯ ಮುಂದೆ ಹೇಳಬಲ್ಲಳೇ ? ಸುನಂದಾ ಎರಡು ಮಕ್ಕಳ ತಾಯಿಯಾದರೂ ತನ್ನ ತೀರ ಕ್ಷುಲ್ಲಕ ಸಮಸ್ಯೆಗಳಿಗೂ ಪರಿಹಾರ ಬಯಸುತ್ತಾಳೆ. ಜಾನಕಿ ಅಂಥ ಏನೊಂದನ್ನೂ ತಾಯಿಯಿಂದ ಕೇಳಿದವಳೇ ಅಲ್ಲ.

ಒಂದು ದಿನ ಏನೋ ಚಿಂತಿಸುತ್ತ ಕುಳಿತ ಮಗಳ ಹತ್ತಿರ ಬಂದ ಮಂದಾಕಿನಿ ಜಾನಕಿಯ ಮೈದಡವಿ,

"ಏನು ಚಿಂತೆ ಜಾನೀ ?" ಎಂದಳು.

"ನಿನ್ನದೇ ಚಿಂತೆ, ಅವ್ವ."

"ನಿನಗೇನು ನನ್ನ ಚಿಂತೆ ?"

"ಇಷ್ಟು ಮಕ್ಕಳನ್ನು ಹೆತ್ತು ಹೇಗಾಗಿದ್ದೀ ನೋಡು ನೀನು !"

"ಹುಚ್ಚೀ ! ನಾನು ಏನೋ ಅಂದಿದ್ದೆ. ಅದು ಯಾರ ಕೈಯಲ್ಲಿಯ ಮಾತು ಮಗಳೇ ?"

"ಯಾಕೆ ನಿನ್ನ ಕೈಯಲ್ಲಿಲ್ಲವೇನು ?"

"ನಿನಗೆ ತಿಳಿಯದು ಜಾನೀ. ಹೆಂಗಸಿನ ಕೈಯಲ್ಲಿರುವುದು ತನ್ನ ಜೀವವೊಂದೇ ನೋಡು."

"ಅವ್ವಾ—"

"ಯಾಕೆ ಜಾನಕಿ ?"

"ಹೀಗೇಕನ್ನುತ್ತೀ ?"

"ಮತ್ತೇನು ಹೇಳಬೇಕು, ನಿನ್ನಂಥವಳಿಗೆ ?"

"ನಾನು ನಿನ್ನ ಹೊಟ್ಟೆಯ ಮಗಳು, ನಿಜ. ಆದರೆ ಇದನ್ನೆಲ್ಲ ಓದಿ ತಿಳಿದ ಡಾಕ್ಟರ್ರು."

"ಇದನ್ನೇ ಕಲಿತಿರುವಿಯೇನು ?"

"ಜನನ ರಹಸ್ಯವೇ ನನ್ನ ವಿಷಯ."

ಮಂದಾಕಿನಿ ಬೆದರಿದಂತಾದಳು. ಆದರೆ ಮಾತಾಡಲಿಲ್ಲ.

"ಅವ್ವಾ—"

"ಏನು ಜಾನಕಿ ?"

"ಹೆಣ್ಣು ಈ ಹೆರಿಗೆಯ ಸೆರೆಯಿಂದ ಹೊರಕ್ಕೆ ಬರಲಾರಳೇ ?"

"ಹಾಗೆಲ್ಲ ಆಡಬಾರದು ಜಾನಕಿ; ನಿನಗಿನ್ನೂ ಮದುವೆಯಾಗಿಲ್ಲ."

"ನಾನು ಮದುವೆಯಾಗಬೇಕಾದದ್ದೇನು ಅಗತ್ಯ ?"

"ಯಾರಿಗೆ ಅಗತ್ಯವಿರುತ್ತದೆ ಜಾನಕಿ ? ಆದರೆ ಅದಕ್ಕೆ ದೈವವೆನ್ನು, ಕರ್ಮವೆನ್ನು, ಧರ್ಮವೆನ್ನು—ಆಗಲೇಬೇಕಾಗುತ್ತದೆ."

" ಆಗದೆ ಇರಲಾರೆನೇನು ನಾನು ? "

" ನೀನು ಕಲಿತವಳು ಜಾನಕಿ; ನಾನೇನು ಹೇಳಲಿ ? "

" ಕಲಿಯದಿದ್ದರೆ ? "

" ಅವರಿಗೆ ಮದುವೆಯ ಬಗ್ಗೆ ಹೆದರಿಕೆ ಇರುವದಿಲ್ಲ. "

" ನನಗೆ ಹೆದರಿಕೆಯೆ ? "

" ಮತ್ತೇನು ? "

" ಅಲ್ಲ, ನನಗೆ ಅದರ ಹೆದರಿಕೆಯಿಲ್ಲ. "

" ಹಡೆದೇನೆಂಬ ಹೆದರಿಕೆ ? "

" ಆದೂ ಇಲ್ಲ. ಹಡೆಯದೇ ಇರಲು ಅನೇಕ ದಾರಿಗಳಿವೆ. "

" ಅದನ್ನಾಡಬೇಡ ಮಗಳೇ. "

" ಯಾಕೆ ? "

" ನಿನ್ನ ಅಭಿಪ್ರಾಯವಾದರೂ ಏನು ? "

" ಈ ಬಹುಸಂತಾನ ನಿಲ್ಲಬೇಕು. "

" ಅದಕ್ಕೇನು ಮಾಡಬೇಕೆನ್ನುತ್ತೀ ? "

" ಅನೇಕ ದಾರಿಗಳಿವೆ. "

" ಅವು ಅಡ್ಡದಾರಿಗಳು. ಅದರಿಂದ ಕ್ಷೇಮವಿಲ್ಲ ಜಾನಕಿ. "

" ಇದಕ್ಕೆ ಆಧಾರ ? "

" ಹೇಳಲಾರೆ ಮಗಳೇ. ನೀನು ಮದುವೆಯಾಗದೆ ನಿನಗೆ ಈ ಗೂಢ ತಿಳಿಯಲಾರದು. "

ಜಾನಕಿ ಸೋತು ಬಾಯಿ ಮುಚ್ಚಿದಳು. ಅವಳು ಬಲ್ಲ ಹಾಗೆ ಅದು ಅವಳ ಮೊದಲ ಸೋಲು.

## ೪

ಮಿತ ಸಂತಾನವನ್ನು ಜಗತ್ತು ಅಪೇಕ್ಷಿಸುತ್ತಿದೆಯೇ, ಇಲ್ಲವೆ ? ಈ ಸಮಸ್ಯೆಯನ್ನು ತಿಳಿಯುವದಕ್ಕಾದರೂ ಈವರೆಗೆ ಸಾಧ್ಯವಾಗದುದಕ್ಕೆ ಜಾನಕಿ ಬಹಳ ನೊಂದುಕೊಂಡಳು. ಸಂತಾನವೇ ಬೇಡ,—ಅದನ್ನು ನಿಲ್ಲಿಸಬೇಕೆಂದು

ಅವಳು ಹುಡುಗಿಯಾಗಿದ್ದಾಗ ಮಾಡುತ್ತಿದ್ದ ಆಕ್ರೋಶ ಇಂದಿಲ್ಲ. ಸಂತಾನೋತ್ಪಾದನೆಯನ್ನು ನಿಲ್ಲಿಸಲು ಮದುವೆಯಾಗಬಾರದು—ಎಂದು ಅವಳು ಅಂದೇ ಮಾಡಿದ ನಿರ್ಧಾರ ಬಲವಿಲ್ಲದ್ದು ಎಂದು ಇಂದವಳಿಗೆ ತಿಳಿದಿದೆ. ಸೃಷ್ಟಿಯ ಉದ್ದೇಶವೇನಿದ್ದೀತು—ಎಂಬ ವಿಚಾರವನ್ನೇನೂ ಅವಳು ಮಾಡಬಯಸುವದಿಲ್ಲ. ಜನನ ರಹಸ್ಯ ಓದಿ ನೋಡಿ ತಿಳಿದ ತನಗೂ ತಾಯಿ ಹೇಳಿದ ಮಾತು—ಮದುವೆಯಾಗದೆ ಈ ಗೂಢ ತಿಳಿಯಲಾರದೆನ್ನುವದು—ಅವಳ ತಲೆ ತಿನ್ನುತ್ತಿದೆ.

ವಿಜ್ಞಾನಪ್ರಜ್ಞೆ, ಲೆಕ್ಕಗಳೆಲ್ಲ ಸಮಾಜಜೀವನಕ್ಕೆ ಚಾಚೂ ಬಿಡದೆ ಹೊಂದುವ ವಿಷಯವಲ್ಲ. ಮನಸ್ಸು ಎಂಬ ಮಹಾ ಜಟಿಲವಸ್ತು ಈ ಲೆಕ್ಕವನ್ನು ದಿನಾ ಬೆಳೆಯಿಸುತ್ತಲಿದೆ. ಗೋಡೆ ತೊಳೆದರೆ ರಾಡಿ ಹೊರಟಂತೆ ಈ ಮನಸ್ಸಿನ ಮೂಲಕ ನಡೆಯುವ ಮಾನವ ವ್ಯಾಪಾರ ಜಾನಕಿಯಂಥ ಎಷ್ಟು ಜೀವಗಳನ್ನು ದಣಿಸುತ್ತಲಿದೆಯೋ!

ಜಾನಕಿಯ ತಾಯಿ ಮಂದಾಕಿನಿ ಗೊಡ್ಡು ವೇದಾಂತದ ಮುದುಕಿಯೇನಲ್ಲ. ಅವಳಿಗೂ ಇಂದಿನ ಜಗತ್ತಿನ ಪ್ರಜ್ಞೆಯಿಲ್ಲದಿಲ್ಲ. ಹಡೆಯುವದು ರಾಜಮಾರ್ಗ, ತಡೆಯುವದು ಅಡ್ಡದಾರಿ— ಇದೇನು ಅವಳ ಸಿದ್ಧಾಂತವಿರಲಾರದು. ತನ್ನ ಸಹೋದರರಲ್ಲಿ ತಾನೊಂದೇ ಬೇರೆಯಾಗಿದ್ದೇನೆ-ಎಂಬ ಪ್ರಜ್ಞೆ ಬಂದಾಗಿನಿಂದ ಜಾನಕಿ ತನ್ನ ಬಾಳಿನ ಗುರಿಯ ಬಗ್ಗೆ ಏನೋ ಲೆಕ್ಕ ಹಾಕತೊಡಗಿದ್ದಾಳೆ. ಆದರೆ ತಾನು ಹತ್ತರೊಡನೆ ಹನ್ನೊಂದು ಅಲ್ಲವೇ ಅಲ್ಲ—ಹನ್ನೊಂದು ಬೇರೊಂದು ಎಂದವಳ ಎಣಿಕೆ. ತಂದೆಯೊಡನೆ ಅಸಡ್ಡೆಯಿಂದ ತಾನೇಕೆ ವರ್ತಿಸಿದಳು? ತಾಯಿಗೆ ಹೆರಿಗೆಯ ಕಾರಖಾನೆಯೆಂದೇಕೆ ಅಂದಳು—ಎಂಬುದರ ಗೂಢವೂ ಅವಳಿಗೆ ತಿಳಿಯದು. ಮದುವೆಯ ಮಾತಿನಲ್ಲಿ ಅಸಹಕರಿಸಿದ್ದು, ಬೇಡ ಬೇಡವೆಂದರೂ ಮೆಡಿಕಲ್ ಓದಲು ಬಂದದ್ದು ಇದೆಲ್ಲ ತನ್ನ ಅಕ್ಕ-ತಮ್ಮ-ತಂಗಿಯರಿಗಿಂತ ಭಿನ್ನವೇ; ಸಂಶಯವಿಲ್ಲ. ಅಕ್ಕ ಹೇಳಿದವನನ್ನು ಮದುವೆಯಾದಳು. ತಮ್ಮಂದಿರು ತಂದೆ ಹೇಳಿದ ಶಾಲೆ ಓದಿದರು. ಅವನು ಮಾಡಹೇಳಿದಂತೆ ನಡೆದರು. ಅಂದರೆ ಅವರ ಅಭಿರುಚಿ ಅವರಿಗೆ ಇಲ್ಲವೇನು? ಇಲ್ಲವೆ ವಾತಾವರಣ ಅವರ ರುಚಿಯನ್ನು ರೂಢಿಸಿ

ಕೊಟ್ಟಿತೇ? ಸ್ವಭಾವ, ರೂಪ, ಬಣ್ಣದ ವ್ಯತ್ಯಾಸ ಇವು ಒಂದು ವಿಶಿಷ್ಟ ಮನೋಭೂಮಿಕೆಯ ಪ್ರತಿಕ್ರಿಯೆಯಿಂದ ಉಂಟಾಗಿರಬಹುದೇ ಹೇಗೆ?

ಇದೆಲ್ಲ ಇರಲಿ. ಮುಖ್ಯವಾಗಿ ತನ್ನ ಹುಟ್ಟಿಗೆ ಇತರರ ಹುಟ್ಟಿಗಿಂತ ಭಿನ್ನವಾದೊಂದು ಕಾರಣವಿರಬಹುದೇ? ಅದನ್ನು ತಿಳಿಯುವ ಬಗೆ ಹೇಗೆ?

ಅವಳು ಓದಿದ ಪುಸ್ತಕಗಳಿಂದ, ನೋಡಿದ ಸಂಗತಿಗಳಿಂದ ಹುಟ್ಟಿಗೆ ಗಂಡು-ಹೆಣ್ಣಿನ ಸಂಯೋಗವೊಂದೇ ಕಾರಣವಾಗಿರುವಂತೆ ಈ ಸಂಯೋಗಕ್ಕೆ ಸಂತಾನವೃದ್ಧಿ ಹೇತುವಾಗಿರಬಹುದೇ? ಸ್ವಭಾವ ರೂಪುಗೊಳ್ಳಲು ಬಸಿರಿಯಾದವಳ ಆಗಿನ ಪರಿಸರ ಬಹುಮಟ್ಟಿಗೆ ಕಾರಣವಾಗುತ್ತದೆಂಬುದನ್ನೂ ಅರಿತಿದ್ದಾಳೆ. ತನ್ನ ಹುಟ್ಟಿನ ಸಮಯದಲ್ಲಿ ತನ್ನ ಬುದ್ಧಿ-ಭಾವನೆಗಳು ಇತರರಿಂದ ವ್ಯತಿರಿಕ್ತವಾಗಿ ರೂಪುಗೊಳ್ಳುವಂತೆ ಯಾವ ವಿಶಿಷ್ಟ ಪರಿಸರ ಕಾರಣವಾಗಿದ್ದೀತು? ಅಂದಿನ ಆ ಪ್ರಸಂಗ ಇಂದು ಯಾರಿಗೆ ನೆನಪಿರಬೇಕು? ತಾಯಿಯಿಂದಲ್ಲದೆ ಇದನ್ನು ತಿಳಿಯುವ ಮಾರ್ಗವಿಲ್ಲ. ಆವಳಾದರೂ ತನ್ನ ಅಂದಿನ ಮಾತನ್ನು ಇಷ್ಟು ದಿನ ಅವಿತಿಟ್ಟುಕೊಂಡು ಬಂದುದನ್ನು ಹೇಗೆ ಹೇಳಿಯಾಳು? ಅದು ಹೇಳುವಂಥ ಮಾತು ಹೌದೇ, ಅಲ್ಲವೆ? ಇತರ ದೇಶಗಳಲ್ಲಿಯಾದರೆ ಇಂಥ ಮಾತು ತಿಳಿಯುವದು ದುಸ್ತರವೇನಲ್ಲ. ಅಂಥ ಅನೇಕ ಮಾತುಗಳ ವರದಿಗಳನ್ನು ಅವಳು ಓದಿದ್ದಾಳೆ. ಆದರೆ ಭಾರತದಲ್ಲಿ, ಆದೂ ತನ್ನ ಪರಂಪರಾಪ್ರಿಯ ಸಂತಾನ ಸಾರ್ವಭೌಮರ ಮನೆಯಿಂದ ಈ ಗುಟ್ಟು ರಟ್ಟಾಗುವದೆಂತು?

ತಾಯಿಗೆ ನಾನು ಕಲಿತವಳೆಂಬ ಅಭಿಮಾನವಿದೆ. ಮದುವೆಯಾಗಲಿಲ್ಲವಲ್ಲಾ—ಎಂದು ಉಳಿದವರಿಗಿಂತ ಹೆಚ್ಚಿನ ಪ್ರೀತಿಯಿದೆ ನನ್ನ ಮೇಲೆ. ಗೂಢ ತಿಳಿಯಬೇಕಾದರೆ ಮದುವೆಯಾಗಬಾರದೆನ್ನುವ ನನ್ನ ನಿರ್ಧಾರಕ್ಕೆ ತಾಯಿಯ ಮಾತು ಆಹ್ವಾನವೇ ಆಗಿದೆ.

ಈ ಗೂಢ—ತನ್ನ ಹುಟ್ಟಿನದು ಯಾವ ದೊಡ್ಡ ಸಾಮಾಜಿಕ ಪ್ರಶ್ನೆ? ಆದರ ಗೂಢಭಂಗದಿಂದ ತಾಯಿ ಯಾವ ಮಾನಸಿಕ ವೇದನೆಯನ್ನು ಅನುಭವಿಸಬೇಕಾಗುವದೋ! ತಾಯಿಯನ್ನು ವಿಶ್ವಾಸದಲ್ಲಿ ತೆಗೆದುಕೊಳ್ಳುವದಾದರೂ ಹೇಗೆ?

ಜಾನಕಿಗೆ ಕಾಲೇಜು, ಪಾಠ ಯಾವುದೂ ಬೇಡವಾಗಿದೆ. ಅವಳು ಹುಚ್ಚಿಯಾಗಿದ್ದಾಳೆ.

ಕಾಲೇಜು ಬಿಟ್ಟು ಮನೆಗೆ ಬಂದ ಮಗಳ ಮುಖ ನೋಡಿ ಮಂದಾಕಿನಿಗೆ ಬಹಳ ಸಂಕಟವಾಯಿತು. ಒಂದು ವಾರಕ್ಕೆ ಮುಂಚೆ ಹೋದವಳು ಬಾಡಿ-ಬತ್ತಿ ಮನೆಗೆ ಬಂದ ಮಗಳನ್ನು ಹೇಗೆ ಉಪಚರಿಸಬೇಕು—ಎಂದು ಚಿಂತಿಸುತ್ತಾಳೆ. ಹೊಲಗಳ ವಸೂಲಿಗೆಂದು ಸುಂದರರಾಯ ಪುಣ್ಯಕ್ಕೆ ಊರಿಗೆ ಹೋಗಿದ್ದಾನೆ. ಜತೆಗೆ ಇಬ್ಬರು ಮಕ್ಕಳೂ ಹೋಗಿದ್ದಾರೆ. ಇಲ್ಲವಾದರೆ ಕೊನೆಯ ಪರೀಕ್ಷೆಗೆ ಓದುವ ಜಾನಕಿ ಏಕೆ ಬಂದಳೆಂದು—ಕಾಲೇಜು ಅವಳಿಗೇಕೆಂದ ಪತಿಯೋ—ಆಕ್ರೋಶ ಮಾಡಿದ್ದರೆ, ಮೊದಲೇ ತಂದೆಯೆಂದರೆ ಪ್ರೀತಿಯಿಲ್ಲದ ಈ ಮಗಳನ್ನು ಆ ಮನೆಯಲ್ಲಿ ಹೇಗೆ ರಕ್ಷಿಸಬೇಕಾಗಿತ್ತೊ! ಆದರಿಂದು ಅದೆಲ್ಲ ಇಲ್ಲ.

ಮನೆಯಲ್ಲಿ ಮಂದಾಕಿನಿ, ಅವಳ ಇಬ್ಬರು ಶಾಲೆಯ ಮಕ್ಕಳು; ಈ ಒಬ್ಬ ಕಾಲೇಜ ಕುವರಿ.

ಒಂದು ರಾತ್ರಿ ಜಾನಕಿಯ ಸನಿಯದಲ್ಲಿ ಮಲಗಿದ ತಾಯಿ ಕೇಳಿದಳು :

"ನಿದ್ರೆ ಬಂತೇ ಜಾನಿ ?"

"ಇಲ್ಲ."

"ನಿನ್ನ ನಿದ್ದೆ ಕದ್ದವರಾರು ಮಗಳೇ ?"

"ನೀನು."

"ನಾನೆ ? ಮತ್ತೆ ಯಾರೂ ಅಲ್ಲವೇ ?"

"ಅಲ್ಲ."

"ನಿನ್ನ ತಲೆ ತಿನ್ನುವ ರಗಳೆ ನನಗೆ ಗೊತ್ತು ಜಾನೀ. ಅದನ್ನು ನಿನಗೆ ಹೇಗೆ ಹೇಳಲಿ ?"

"ನನ್ನಲ್ಲಿ ನಿನಗೆ ವಿಶ್ವಾಸವಿಲ್ಲವೇ ಅವ್ವ ? ನಿನ್ನ ಯಾವ ವರ್ತನೆಯನ್ನು ನಾನು ಮೂದಲಿಸಿದ್ದೇನೆ ?"

"ನನ್ನ ವರ್ತನೆ ಅಂಥ ಅಸಡ್ಡೆ ಮಾಡುವಂಥದೇನಿದೆ ಜಾನಿ ?"

"ಹಾಗಾದರೆ ಹೇಳು."

"ಏನು ಹೇಳಲಿ ?"

"—ನನ್ನ ತಂದೆ ಯಾರು—ಹೇಳು."

"ಜಾನಕಿ !"

"ಕ್ಷಮಿಸು ಅವ್ವ."

"ನಿನ್ನದೇನು ತಪ್ಪು ಬಿಡು; ನೀನು ಹುಟ್ಟಿದ ಗಳಿಗೆ ಅಂಥಾದ್ದು."

"ಎಂಥಾದ್ದು ?"

"ನಿನ್ನನ್ನು ಹುಟ್ಟಗೊಡಬಾರದೆಂದು ನಿನ್ನ ತಂದೆ ಯತ್ನಿಸಿದರು."

"ನೀನು ?"

"ನಾನು—ನಾನು ಹೇಗೆ ಯತ್ನಿಸಲಿ ಜಾನಿ ? ಆದರೆ ನೀನು ಮೂಡಲಿಕ್ಕೆ ಹೇಗೆ ನಿನ್ನ ತಂದೆ ಬಲವಂತದ ಕಾರಣರಾದರೋ—ನಾನದಕ್ಕೆ ಹೇಗೆ ವಿಧಿಯಿಲ್ಲದೆ ಬಾಗಬೇಕಾಯಿತೋ ಹಾಗೆ ಅವರ ಯತ್ನದಲ್ಲಿ ಅರ್ಧ ಯತ್ನ ನಾನು ಮಾಡಲೇಬೇಕಾಯಿತು. ಅದು ಹೆಣ್ಣಿನ ಕರ್ಮ ಮಗಳೇ."

"ಅದು ಹೇಗೆ ?"

"ಜಾನಕಿ, ಇನ್ನು ನನ್ನದೇನು ? ಮರ್‍ಯಾದೆಯಲ್ಲದ ಕೆಲಸವನ್ನೇನೂ ನಾನು ಮಾಡಲಿಲ್ಲ—ಆದರೆ ?"

"ಅವ್ವ !"

"ಜಾನೀ—"

"ನನ್ನಲ್ಲಿ ವಿಶ್ವಾಸವಿಲ್ಲವೇ ?"

"ಇಲ್ಲದೇನು ಮಗಳೇ ! ಆದರೆ ನನಗೆ ಅದರ ಕಾರಣವಿಲ್ಲ !"

"ಹೀಗೇಕೆ ?"

"ನಾನಂಥ ಅವಿಶ್ವಾಸದ ಕೆಲಸ ಮಾಡಿಲ್ಲ ಜಾನೀ."

"ಮತ್ತೇಕೆ ಹೆದರಿಕೆ ?"

"ಹೆದರಿಕೆಯೇನಿಲ್ಲ. ನಾನು ನಿನಗೆ ಹೇಳಲೇಬೇಕಾಯಿತು....ನಿನ್ನ ಅಕ್ಕ ಹುಟ್ಟಿದ ಒಂದು ವರುಷದಲ್ಲಿ ನೀನು ಹೊಟ್ಟೆಯಲ್ಲಿ ಮೂಡಿದಿ,—ಅದೂ ನಿನ್ನ ತಂದೆಯ ಒತ್ತಾಯದಿಂದಲೇ. ನಿನ್ನ ಹುಟ್ಟಿನ ಅಪೇಕ್ಷೆಯೇನಲ್ಲ. ಆದರೆ ನಾನು ಬೇಕೆಂಬ ಒತ್ತಾಯ. ಆಗ ಸುನಂದಾ ಇನ್ನೂ ಮಗು. ನನ್ನ ಸಕಲ ದೃಷ್ಟಿಯೆಲ್ಲ ಅವಳ ರಕ್ಷೆಯ ಕಡೆಗೇ ಇತ್ತು. ನೀನು ಮೂಡುವವರೆಗೆ

ನನ್ನಲ್ಲಿ ರಮಿಸಿದ ನಿನ್ನ ತಂದೆ ಬಸಿರು ನಿಂತುದು ಗೊತ್ತಾದಾಗ ಹೆದರಿದರು. ಈ ಹುಟ್ಟು ಬೇಡ. ಇದನ್ನು ಅದುಮಲು ಮಾರ್ಗವಿದೆ—ಎಂದು ನನ್ನನ್ನು ಒಲಿಸಲು ಯತ್ನಿಸಿದರು. ಭ್ರೂಣಹತ್ಯೆ ಮಹಾಪಾತಕ ಎಂದಿಷ್ಟೇ ನನಗೆ ಗೊತ್ತು. ಇಂದಿಗೂ ಅದು ಪಾತಕವೆಂದೇ ನನ್ನ ನಂಬಿಕೆ. ನಾನೇನು ವ್ಯಭಿಚಾರದಿಂದ ಬಸಿರಾಗಿದ್ದಿಲ್ಲ. ನೀನು ಮೂಡಿ ಆಗಿತ್ತು. ಪೇಟೆಯ ಆ ಒಂದು ಚೀಟು ಕಪ್ಪು ಪುಡಿಯ ಸೇವನೆಯಿಂದ ನನ್ನ ಹೊಟ್ಟೆಯಲ್ಲಿ ಬಹು ಸಂಕಟವಾಯ್ತು. ಬುದ್ಧಿ ಸ್ವಾಧೀನ ತಪ್ಪಿತು. ನಿನ್ನ ತಂದೆಯನ್ನೇ ಮುಗಿಸಿ ಬಿಡುವ ಚಿತ್ತಭ್ರಮೆ ಒಮ್ಮೆ ಉಂಟಾಯಿತು. ಆದರೆ ಅದು ಇನ್ನೂ ಘೋರ ಪಾತಕ. ಭ್ರೂಣಹತ್ಯ ಪಾತಕ; ಅದರ ಪ್ರತಿಕ್ರಿಯೆ ಮುಂದಿನ ಜನ್ಮದಲ್ಲಿ. ಆದರೆ ಪತಿಯ ಹತ್ಯೆ ಪಾತಕವಿಷ್ಟೇ ಅಲ್ಲ; ಅದರ ಪ್ರತಿಕ್ರಿಯೆ ಇಹಜನ್ಮದಲ್ಲಿಯೇ—ಘೋರತರವಾಗಿ ಉಂಟಾಗುವದನ್ನು ನೆನೆದು ನಡುಗಿದೆ. ನನಗೆ ಅವರು ಬೇಕು. ನೀನೂ ಬೇಡವೆಂದಲ್ಲ. ಈ ಕಾರಣಮೀಮಾಂಸೆಯಿಂದ ನಾನು, ನಿನ್ನ ತಂದೆಯೊಡನೆ ಇಲ್ಲದ ವೈರ ಕಟ್ಟಿಕೊಂಡರೂ ಅದನ್ನು ತೋರಗೊಡುವ ಧೈರ್ಯ ಹೆಣ್ಣಾದ ನನಗೆ ಹೇಗೆ ಬಂದೀತು ಮಗಳೇ. ನೀನು ಹೊಟ್ಟೆಯಲ್ಲಿ ಬೆಳೆಯುತ್ತಿದ್ದಾಗ ನಾನು ಅನುಭವಿಸಿದ ಮೂಕ ಸಂಕಟದ ಮೂರ್ತಿಮಂತ ಪ್ರತೀಕವಾಗಿ ನೀನು ಹುಟ್ಟಿ ಬಂದಿ. ಅಂದಿನ ನನ್ನ ಮನಸ್ಸಿನ ಹೋರಾಟ ಇಂದಿಗೂ ನಿನ್ನ ನರ-ನರಗಳಲ್ಲಿ ನರ್ತಿಸುತ್ತಿದೆ. ಇದನ್ನು ದಿನವೂ ಕಾಣುತ್ತಿರುವ ನಾನು, ನಿನಗೂ ನಿನ್ನ ತಂದೆಗೂ ನಡುವಿರುವ ಕಂದರವನ್ನು ಮುಚ್ಚುವ ಯತ್ನದಲ್ಲಿ ಸೋತು ಸುಣ್ಣವಾಗಿದ್ದೇನೆ. ಸತ್ತು ಬದುಕಿದ್ದೇನೆ. ನೀನು ಹುಟ್ಟುವವಳೇ ಇದ್ದಿ; ಹುಟ್ಟಿದಿ. ಆ ಕೃತ್ರಿಮ ನಿದಾನ ನನ್ನ ಅಶ್ರದ್ಧೆಯ ಕಾರಣದಿಂದಲೋ ಏನೋ—ನಾಟಲಿಲ್ಲ. ಅದೇ ಇರಬೇಕು; ತಂದೆ-ಮಗಳಲ್ಲಿ ಇನ್ನೂ ಅದೇ ಹೋರಾಟವಿದೆ. ಮುಂದೆ ಇಷ್ಟು ಮಕ್ಕಳಾದರೂ ಅವರು ಔಷಧಿ ತರಲಿಲ್ಲ; ನಾನು ತಕ್ಕೊಳ್ಳಲಿಲ್ಲ. ಆಯಿತಲ್ಲ ಮಗಳೇ—ಮಕ್ಕಳು ಬೇಡವೆಂದರೆ ಇಂಥ ಔಷಧಿಗಳೇ ? ನೀನು ಡಾಕ್ಟರ್ತಿ. ಏನೇನು ಕಲಿತಿರುವಿಯೋ ! ಆದರೆ ಜಾನೀ ಮದುವೆಯಾಗದ ನೀನು ಇಂಥ ಔಷಧಿ ಯಾರಿಗೆ ಎಂದು ತಿಳಿಯಬಲ್ಲೆಯಾ? ನನ್ನ ತಾಯಿ ಬಹು ಸಂತಾನಿ. ನಾನೂ ಹಾಗೇ ಆದೆನಲ್ಲ—ಇದು ನನ್ನ ಇಲ್ಲನೆ ತಾಯಿಯ ತಪ್ಪು ಮಾತ್ರವೇ ಏನು?

ಗಂಡಿಗೆ ಮಿತ ಸಂತಾನದ ಔಷಧಿಯುಂಟೆ? ಜಾನೀ, ಅದರ ಅವಶ್ಯಕತೆ ನಿನಗೆ ಈಗ ತಿಳಿಯದು. ಪುರುಷಬುದ್ಧಿ ನಡೆಸುತ್ತಿರುವ ಹೆಣ್ಣಿನ ಮೇಲಿನ ಆಕ್ರಮಣ,—ಅದಕ್ಕೆ ಔಷಧಿಯುಂಟೇ? ಅದಿಲ್ಲದ ನಿನ್ನ ವಿದ್ಯಾ-ಬುದ್ಧಿ ಪೂರ್ತಿಯಾಗಲಾರದು. ಇದು ತಿಳಿಯಬೇಕಾದರೆ ಕುಮಾರಿಯಾದ ನೀನು ಸಮರ್ಥಳಾಗುವದು ನನಗೆ ಸಂಶಯ."

ಜಾನಕಿ ಅಳುತ್ತಿದ್ದಳು; -ತಾಯನ್ನಪ್ಪಿಕೊಂಡು ಅಳುತ್ತಲೇ ಇದ್ದಳು. ಮಂದಾಕಿನಿ ತನ್ನ ಉದ್ವೇಗವನ್ನು ತಡೆದುಕೊಳ್ಳಲು ಯತ್ನಿಸುತ್ತಿದ್ದಂತೆಯೇ ಇಪ್ಪತ್ನಾಲ್ಕರ ಈ ಮಗುವನ್ನು ಮಗ್ಗುಲಲ್ಲಿರಿಸಿಕೊಂಡು ರಮಿಸುತ್ತಿದ್ದಳು.

ಜಾನಕಿಗೆ ಪರಿಹಾರ ದೊರೆಯಿತೋ,—ತಿಳಿಯದು. ಆದರೆ ಮಂದಾಕಿನಿ ಇದಕ್ಕೆ ಪರಿಹಾರವೇ ಇಲ್ಲ ಎಂಬಂತೆ ಮಗಳನ್ನೊಮ್ಮೆ, ಜಂತೆಯನ್ನೊಮ್ಮೆ ನೋಡುತ್ತಾಳೆ. ಕಣ್ಣು ಮುಚ್ಚಿ ತನ್ನಲ್ಲೇ ಹುಡುಕುತ್ತಾಳೆ; ಕಣ್ಣು ತೆರೆದು ನೋಡುತ್ತಾಳೆ—

ಎದುರಿಗೆ ಗೋಡೆ! ಎಲ್ಲಾ ಗೋಡೆ!!

# ಬಯಕೆಯ ನೋವು

## ೧

ಬೆಳಗಿನ ಏಳು ಗಂಟೆಯಾದರೂ ಸತೀಶನ ಸಕ್ಕರೆ ನಿದ್ದೆ ಇನ್ನೂ ತಿಳಿದಿರಲಿಲ್ಲ. ಮಡದಿ ಶಾರದೆ ಹೊತ್ತಿಸಿದ್ದ ಸ್ಟೋವಿನ ಸಪ್ಪಳ ಅವನಿಗೆ ಜೋಗುಳವೇ ಆಗಿತ್ತು. ಅವನ ತಂಗಿ ನೀರದೆಯ ಮಗಳು ರೇಖಾ ಬಂದು ಅವನನ್ನು ಎಬ್ಬಿಸಿದಾಗ ಕಣ್ಣೊರಸುತ್ತ ಎದ್ದು ಕುಳಿತ. ಎದುರಿಗೆ ಶಾರದೆ ಚಹದ ಕಪ್ಪನ್ನು ಹಿಡಿದು ನಿಂತವಳು,

" ನೋಡಿ, ನಿಮ್ಮ ಸೊಸೆ—ಚಿಕ್ಕ ಹುಡುಗಿ, ಅಷ್ಟು ಹೊತ್ತಿಗೇ ಎದ್ದು ಬಂದಿದ್ದಾಳೆ. ನಿಮಗಿನ್ನೂ ಸರಿರಾತ್ರಿ ! " ಎಂದಳು.

" ನಿನ್ನೆ ರಾತ್ರಿಯೇ ಇಲ್ಲಿ ಬಂದು ಮಲಗಿದ್ದಳೇನು ಈ ಪುಟ್ಟಾಣಿ ? "

" ನಿಮಗೆ ನಿನ್ನೆ ರಾತ್ರಿಯಿಂದ ಎಚ್ಚರವಿಲ್ಲವೆಂದಾಯಿತು. "

" ರಾತ್ರಿ ಎಚ್ಚರವಿರಬೇಕೆಂದೇನೂ ಇರುವದಿಲ್ಲ ಶಾರೂ. ಆದರೆ ನೋಡು : ನಾನು ನಿನ್ನೆ ಮಲಗುವಾಗ ಓದುತ್ತಿದ್ದ ಪುಸ್ತಕದ ಪರಿಣಾಮವೋ ಏನು ಮಣ್ಣೋ ! ಎಂಥ ಕೆಟ್ಟ ಕನಸು ಕಂಡೆನೆನ್ನುವಿ? ಥೂ ! ಹಾಳು ಹಾಳು ಜನ; ಹಾಳು ಹಾಳು ಮಾತು ! ನಡುವೆ ಒಮ್ಮೆ ಎಚ್ಚರವಾಗಿ ಮತ್ತೆ ಕಣ್ಣು ಕೂಡಿದ್ದು ಒಂದು ಕೋಳಿ ಕೂಗಿದ ಮೇಲೇ. ನೀನೆನ್ನುತ್ತೀ: ಎಚ್ಚರವಿಲ್ಲ; ಸರಿ ರಾತ್ರಿ—ಎಂದು. "

" ಮತ್ತೇನೆನ್ನಲಿ, ನಿಮಗಿನ್ನೂ ಬೆಳಗಾಗದಿದ್ದಾಗ? ರೇಖಾ ನಿನ್ನೆ ರಾತ್ರಿಯೇ ಇಲ್ಲಿ ಬಂದಿದ್ದರೆ ನಿಮಗೆ ತಿಳಿಯದಿರುತ್ತಿತ್ತೆ ? ಏನಾದರೊಂದು!"

" ಸಾಕುಬಿಡು, ಮಹಾರಾಯತಿ. ಚಹಾ ಆರುತ್ತದೆ " ಎನ್ನುತ್ತ ಸತೀಶ ಅರೆಗಣ್ಣಿನಿಂದ ಚಹವನ್ನು ನೋಡುತ್ತ, ಬಾಯಿ ಚಪ್ಪರಿಸುತ್ತ ಅದನ್ನು ಹೀರತೊಡಗಿದ.

" ಮಾಮಾ, ಅಮ್ಮ ನಿನ್ನನ್ನು ಕರೆದಿದ್ದಾಳೆ. "

ಈವರೆಗೆ ತೆಪ್ಪಗೆ ನಿಂತಿದ್ದ ರೇಖಾ ಒಮ್ಮೆ ಬಾಯಿ ಬಿಟ್ಟಳು.

ಆದಕ್ಕೆ ಸತೀಶ,

"ಹೂಂ. ಅವಳಿಗೆ ಕೆಲಸವಿಲ್ಲ. ನಾಲ್ಕು ದಿನವಾಯಿತು; ನಾನು ಹೋಗಿಲ್ಲ;—ಅವಳು ಬಂದಾಗ ನಾನು ಮನೆಯಲ್ಲಿರಲಿಲ್ಲ. ಬಂತು ವಾರಂಟು! ಬೇರೆ ಊರಲ್ಲಿದ್ದರೇನು ಮಾಡುತ್ತಿದ್ದಳೋ! ಅಮ್ಮ ಹೋದಮೇಲೆ ಇವಳದು ಹೆಚ್ಚಾಗಿದೆ ಕೊಂಡಾಟ."

"ಮಾಮಾ, ಬೇಗ ಬರಬೇಕಂತೆ!"

"ಹೂಂ, ನೋಡಿದೆಯಾ? ರಾಜೂ ಎದ್ದಿದ್ದಾನಿಲ್ಲವೊ ಇನ್ನೂ? ನೀನೇಕೆ ಚಳಿಯಲ್ಲಿ ಬಂದೆ ರೇಖಾ? ಇಂದು ದೋಸೆ-ಗೀಸೆ ಉಂಟೇನು? ಹೂಂ-ನಡಿ. ಅಲ್ಲೇ ಮುಖ ತೊಳೆಯುತ್ತೇನೆ."

ಶಾರದಾ ಮತ್ತೆ ಬಂದವಳು ಬೇಸರಗೊಂಡಂತೆ ನುಡಿದಳು:

"ನಿಮಗೆ ಈ ಮಕ್ಕಳಾಟ ಎಂದು ಹೋದೀತು? ನೀರದಾ ಹಾಸಿಗೆಯಿಂದಲೇ ಎಬ್ಬಿಸಿ ಮಗಳನ್ನು ಕಳಿಸಿದ್ದಾಳೆ. ರಾಜಣ್ಣ ಮನೆಯಲ್ಲಿಲ್ಲವಂತೆ. ಬೇಗ ಎದ್ದು, ಒಮ್ಮೆ ಹೋಗಿ ಬರಬಾರದೆ?"

"ಹೂಂ, ಬೇಗ ಎದ್ದವಳು ನೀನು. ನೀನೇ ಹೋಗಿದ್ದರೆ ಇಷ್ಟರಲ್ಲಿ ಬಂದುಬಿಡುತ್ತಿದ್ದಿ. ಈ ಒಂದು ದಿನ ಏಳುವುದು ತಡವಾದರೆ ಇಷ್ಟು ಮಾತು. ಥೂ! ಮತ್ತೇಕೆ ಆ ಹಾಳು ಕನಸಿನ ನೆನಪು?"

"ಏನದು ಕನಸು? ಅದನ್ನಾದರೂ ಹೇಳಬಾರದೆ? ಸಂಜೆ ತಿರುಗಾಡಲು ಎಲ್ಲಿ ಹೋಗಿದ್ದರೋ! ಆ ಮೈಲಾರದ ಹಾದಿಗೆ ಹೋಗುವದು—ಏನದು ಕನಸು?"

"ಇರಲಿ ಬಿಡು; ತಡವಾಗುತ್ತದೆ."

—ಎನ್ನುತ್ತ ಸತೀಶ ಹಾಸಿಗೆಯಿಂದೆದ್ದು ಮೈ ಮುರಿದುಕೊಳ್ಳುತ ಹಿತ್ತಿಲಿಗೆ ಹೋದ.

ಶಾರದಾ ರೇಖಾನನ್ನು ಏನು ಕೇಳಿದರೂ ಅವಳು ಮಾತನ್ನೇ ಆಡುವುದಿಲ್ಲ. ನಿದ್ದೆಯಲ್ಲಿಯೇ ಬಂದಂತಿದ್ದಾಳೆ.

"ಮಾಮಾ ಬರಬೇಕಂತೆ; ಅಮ್ಮ ಹೇಳಿದಳು" ಒಂದೇ ಮಾತು. ನೂರು ಪ್ರಶ್ನೆಗೂ ಒಂದೇ ಮಾತು.

ಸತೀಶ ಎದ್ದ ಕೂಡಲೆ ಪಕ್ಕದಲ್ಲಿ ಮಲಗಿದ್ದ ಸುಧೀರ ಹಾಸಿಗೆಯಲ್ಲೇ ಹೊರಳುತ್ತಿದ್ದವನು ರೇಖಾನ ಸ್ವರ ಕೇಳಿ ಎದ್ದು ಕುಳಿತು,

" ಬಾ, ರೇಖೂ—ಅಮ್ಮ, ನಮಗೆ ' ಏನಾರೆ ' ಕೊಡು. "

ಮುಖ ತೊಳೆದು ಬಂದ ಸತೀಶ ಶಾರದೆಯ ಚಹದಲ್ಲಿ ಪಾಲು ಬೇಡ ಲೆಂದು ಅವಳ ಬದಿಗೆ ಬಂದು ಕುಳಿತ.

" ಸಾಕು ಸಾಕು. ಇನ್ನು ನಿಮ್ಮನ್ನು ಕರೆಯಲು ನೀರದೆಯೇ ಬರ ಬೇಕು. ಒಮ್ಮೆ ಹೋಗಿ ಬರಬಾರದೆ ? "

" ಆಯ್ತು ಮಹಾರಾಯಳೆ. ಇದೋ ಹೊರಟೆ. ನೀರದಾ ಬರೀ ಚಹ ವನ್ನೇ ಕೊಡುವದಿಲ್ಲ ನಿನ್ನಂತೆ. ಏನಾದರೂ ತಿನಿಸು ಇದ್ದೀತು. ನಿನ್ನ ಹಂಗು ಬೇಡ.... "

—ಎನ್ನುತ್ತ ಏಳಬೇಕೆಂದಾಗ ಶಾರದಾ ಎರಡನೆಯ ಕಂತಿನ ಚಹ ವನ್ನೂ ಅವನಿಗರ್ಪಿಸಿ,

" ಇನ್ನು ಹೋಗಿ ಅವಳನ್ನು ಕಾಡಬೇಡಿ. ರಾಜಣ್ಣನಿಲ್ಲ. ಅವಳು ಇಷ್ಟು ನಸುಕಿಗೆ ಚಹವನ್ನೇ ಮಾಡುವದಿಲ್ಲ " ಎಂದಳು.

" ಏಳಮ್ಮ ರೇಖೂ, ನಿಮ್ಮಮ್ಮ ನನ್ನನ್ನು ಕರೆದದ್ದು ಹೌದೋ— ಅಲ್ಲವೋ, ನೋಡಿಬಿಡೋಣ. "

" ಅವಳೇಕೆ ? ಸುಧೀರನೊಡನೆ ಇಲ್ಲೇ ಆಡಿಕೊಂಡಿರಲಿ. ನೀವೊಮ್ಮೆ ಹೋಗಿಬರಬಾರದೆ ? "

ಅಂತೂ ಒಮ್ಮೆ ಸತೀಶ ಅಂಗಿ ಹಾಕಿಕೊಂಡು ಹೊರಬಿದ್ದ. ನೀರದೆಯ ಮನೆ ಅಲ್ಲಿಂದ ಅಷ್ಟು ದೂರವೇನೂ ಇರಲಿಲ್ಲ. ಇವನು ಬಂದಾಗ ಬಾಗಿ ಲಲ್ಲೇ ನಿಲ್ಲಬೇಕಾಗಿದ್ದ ತಂಗಿ ಅಂದು ಅಲ್ಲಿ ಕಾಣಲಿಲ್ಲ. ಒಳಕ್ಕೆ ನಡೆದರೆ ಯಾರ ಸುಳಿವೂ ಇಲ್ಲ. ಮೊಗಸಾಲೆಯಲ್ಲಿ ರಾಜನ ಸೈಕಲ್ಲೂ ಇಲ್ಲ.

" ನೀರದಾ " ಎಂದೊಮ್ಮೆ ಕರೆದ.

ಬದಿಯ ಕೋಣೆಯಲ್ಲಿ ಬೋರಲಾಗಿ ಮಲಗಿದ ನೀರದೆ ಸಾವರಿಸಿ ಕೊಂಡು ಎದ್ದು ಕುಳಿತಳು. ಸತೀಶ ಹೋಗಿ ಅವಳ ಪಕ್ಕದಲ್ಲಿ ಕುಳಿತು,

" ಯಾಕಮ್ಮಾ, ನನ್ನನ್ನು ಕರೆಕಳಿಸಿ ನೀನು ಮಲಗಿಬಿಟ್ಟಿಯೇನು ? ರಾಜನೆಲ್ಲಿ ? " ಎಂದ.

" ಅಣ್ಣಾ " ಎಂದು ಬಿಕ್ಕಳಿಸಿದಳು ನೀರದೆ.

ಸತೀಶ ಈಗ ಪೂರಾ ಎಚ್ಚತ್ತಂತಾಗಿ ತಂಗಿಯನ್ನು ನೋಡಿದ! ಊದಿದ ಕಣ್ಣುಗಳಿಂದ ಗಂಗಾ-ಯಮುನಾ ಪ್ರವಾಹ. ನೀರದೆಯ ಮುಖ ಕೆಂಜಗವಾಗಿದೆ.

" ಏನಿದು ನೀರದಾ, ಯಾಕಮ್ಮಾ-ಏನಾಗಿದೆ ನಿನಗೆ ? "

—ಎನ್ನುತ್ತ ಹತ್ತಿರ ಸರಿದು ಅವಳ ತಲೆ ಸವರಿ, ಮುಖವನ್ನೆತ್ತಿ ಅವಳ ಕಣ್ಣಲ್ಲಿ ನೋಡಲೆತ್ನಿಸಿದ.

ನೀರದೆ ಮುಖವನ್ನೆ ಎತ್ತದೆ, ಮಾತನ್ನೂ ಆಡದೆ ಇವನ ತೊಡೆಯ ಮೇಲೆ ತಲೆಯನ್ನಿಟ್ಟು, ಬಿಕ್ಕಿಬಿಕ್ಕಿ ಅಳತೊಡಗಿದಳು.

" ಅಯ್ಯೋ— ಹುಚ್ಚೀ, ನನ್ನ ತಂಗಿ—ನೀರದೆ— ಅಳುತ್ತಾಳೆಂದರೆ ಯಾರು ನಂಬಬೇಕು ? " ಬೆನ್ನಮೇಲೆ ಕೈಯಾಡಿಸುತ್ತ " ಏಳು ನೀರದಾ, ರಾಜ ಊರಿಗೆ ಹೋದನೆ ? ನೀನು ಬೇಡವೆಂದಿಯೇನು ? ನೀನೇಕೆ ಹಾಗೆನ್ನ ಬೇಕು ?....ಇಷ್ಟು ನಸುಕಿಗೆ ಚಳಿಯಲ್ಲಿ ರೇಖೂನ್ನ ಯಾಕೆ ಕಳಿಸಿದಿ ? ಏಳು ನೀರದಾ, ಅಮ್ಮನ ನೆನಪಾಗಿದೆಯೇನು ?....ನಾನೂ ಅಳಬೇಕೆನ್ನುವಿಯೇನು ? "

ಭುಜ ಹಿಡಿದು ತಂಗಿಯನ್ನೆಬ್ಬಿಸಿ ಕೂಡಿಸಿದ. ನೀರದೆ ಮುಖವನ್ನೆ ಎತ್ತುವದಿಲ್ಲ.

ಮತ್ತೆ " ಅಣ್ಣ "—ಒಂದೇ ಮಾತು !

## ೨

ಕಳೆದ ವರುಷವೇ ಈ ಅಣ್ಣ-ತಂಗಿಯರು ತಾಯನ್ನು ಕಳೆದುಕೊಂಡಿದ್ದರು. ತಂದೆ ತೀರಿದಾಗ ನೀರದೆಯಿನ್ನೂ ಮಗು. ಅವಳಿಗೆ ತಂದೆಯ ನೆನಪೇ ಇಲ್ಲ. ಕಾವೇರಮ್ಮ ತಂದೆಯೂ ಆಗಿ ಮಕ್ಕಳನ್ನು ಚೆನ್ನಾಗಿ ಸಲಹುತ್ತ ಓದಿಸಿದ್ದಳು. ಇವರಿಬ್ಬರನ್ನೂ ಮುಂದಿರಿಸಿಕೊಂಡು ತನ್ನೆಲ್ಲ ದುಃಖವನ್ನೂ ಮರೆತಿದ್ದಳು. ಕಾವೇರಮ್ಮ ತನ್ನ ಕಾಲಲ್ಲಿ ಶಕ್ತಿ ಇರುವಷ್ಟು ದಿನವೂ ಎರಡೂ ಮನೆಯ ದಾರಿಯನ್ನು ದಿನವೂ ಅಳೆದವಳು. ಸಾಯುವಾಗ ಮಕ್ಕಳಿಬ್ಬರನ್ನೂ ಕರೆದು ' ನೀರದೆಯನ್ನು ದೂರ ಮಾಡಬೇಡವೆಂದು ಸತೀಶನಿಗೂ, ಸತೀಶ

ನನ್ನ ಮರೆಯಬೇಡ'ವೆಂದು ನೀರದೆಗೂ ಹೇಳಿದ್ದಳು. ತಾಯಿಯ ಕಣ್ಣ ಬೆಳಕಾಗಿ, ಇಷ್ಟು ಅಚ್ಚುಮೆಚ್ಚಾಗಿ ಬೆಳೆದ ಈ ಅಣ್ಣ-ತಂಗಿಯರಿಗೆ ತಾಯಿ ಈ ಮಾತನ್ನು ಹೇಳಬೇಕಾಗಿಯೇ ಇರಲಿಲ್ಲ. ಈ ಪ್ರಸಂಗದಲ್ಲಿ ಏನೋ ಹೇಳಬೇಕೆನಿಸಿರಬೇಕು; ಹೀಗೆ ಹೇಳಿರಬೇಕು—ಎಂದೇ ತಿಳಿದಿದ್ದರಿವರು.

ರಾಜ ಸತೀಶನ ಸಹಪಾಠಿ. ಆದರವನು ಕಾಲೇಜು ಬಿಟ್ಟು ವ್ಯಾಪಾರದ ಒಂದು ಕಂಪನಿ ತೆಗೆದುದರಿಂದ ಇಬ್ಬರಿಗೂ ನೆರೆ ತಪ್ಪುವಂತಿತ್ತು. ಆದರೆ ನೀರದೆಯನ್ನು ಕಂಡು ಮೆಚ್ಚಿದ ರಾಜ ತಾನಾಗಿ ಕೇಳಿ–ಪಡೆದು ಅವಳನ್ನು ಮದುವೆಯಾದ. ಸತೀಶನೊಡನೆ ಸ್ನೇಹವೂ ಬೆಳೆಯಿತು. ಸತೀಶ ಅನಾನುಕೂಲದಿಂದ ಕಾಲೇಜು ಬಿಡಬೇಕಾಗಿ ಬಂದಾಗಲೆಲ್ಲ ರಾಜ ಅವನಿಗೆ ''ನೀನಾದರೂ ಕಲಿತು ಮುಂದಾಗು ಸತೀ; ನಾನು 'ವಣಿಜ' ನಾದೆ—'' ಎಂದು ಅವನಿಗೆ ತಕ್ಕ ನೆರವನ್ನು ನೀಡಿದ್ದ. ಮುಂದೆ ಸತೀಶ ವಕೀಲಿ ಪರೀಕ್ಷೆ ಮುಗಿಸಿ ಬಂದಾಗ ಅವನೇ ಹೇಳಿದ್ದ: ''ನಾನು ಜನರಿಗೆ ಬೇಕಾದ ವಸ್ತುಗಳನ್ನಾದರೂ ಮಾರುತ್ತೇನೆ. ಆದರೆ ನೀನು ಯಾರಿಗೂ ಬೇಡವಾದ ಮಾತುಗಳನ್ನು ಮಾರುವ ವ್ಯಾಪಾರಿಯಾದಿ'' ಎಂದು ನಗೆಯಾಡಿದ್ದ. ಸತೀಶನ ಮದುವೆ ನೋಡಿ ಕಣ್ಣು ಮುಚ್ಚುವೆನೆಂದು ಹೇಳಿದ ಅತ್ತೆಗೆ ಶಾರದೆಯನ್ನು ಸೊಸೆಯಾಗಿ ತಂದವನೂ ರಾಜನೇ. ಇಂಥ ಅನ್ಯೋನ್ಯವಾಗಿ ಬೆಳೆದುಬಂದಿತ್ತು–ಈ ಎರಡು ಮನೆಗಳ ಬಾಂಧವ್ಯ.

ನೀರದೆ ಎಂದೂ ಅತ್ತು-ಕರೆಯುವ ಹೆಣ್ಣಲ್ಲ. ಯಾವಾಗಲೂ ನಗುನಗುತ್ತ ಚಕ್ಕಂದವಾಗಿರುವಾಕೆ. ಓದಿದವಳೆಂಬ ಗರ್ವವಿಲ್ಲ. ಮನೆಯ ಕೆಲಸವೆಂದರೆ ತುಂಬ ಪ್ರೀತಿ. ಹಾಡುತ್ತಾಳೆ. ಕಸೂತಿ–ಹೆಣಿಕೆಗಳೂ ಗೊತ್ತು. ತನ್ನ ಮನೆಯ ಸುತ್ತಲೂ ಅವಳು ಬೆಳೆಸಿದ ಹೂದೋಟದ ಬಣ್ಣ–ಬಣ್ಣದ ಹೂಗಳು ಅವಳ ಅಭಿರುಚಿಗೆ ಸಾಕ್ಷಿಯಾಗಿವೆ. ಇಂಥವಳನ್ನು ಪಡೆದುದು ತನ್ನ ಭಾಗ್ಯವೆಂದು ಎತ್ತಿ ಆಡುತ್ತಿದ್ದ ರಾಜ. ಅದಕ್ಕೆ ನೀರದೆ, ''ನಾನು ಹೇಳಬೇಕಾದ ಮಾತದು. ಗಂಡಸು ಹಾಗೆ ಹೇಳಬಾರದು'' ಎನ್ನುವಳು. ಇಂಥ ಮಾತುಗಳೂ ಸರಿ. ಬರೀ ದುಡ್ಡಿನ ಆಟದಲ್ಲಿರುವ ರಾಜ ಮನೆಯನ್ನು ಅಲಕ್ಷಿಸಿದಂತೆ ಮೊದಲು ಕಂಡಾಗಲೇ ನೀರದೆ ಕೆರಳಿ ನುಡಿದಿದ್ದಳು: ''ನಿಮ್ಮ ಗಳಿಕೆ ಯಾತಕ್ಕೆ ? ನನಗೆ ದುಡ್ಡು ಮಾತ್ರ ತಂದು ಸುರಿದರೆ ಸಾಕೆ ? ನಿಮ್ಮನ್ನು ಈ

ದುಡ್ಡಿಗೆ ಮಾರಿಕೊಳ್ಳಲಾರೆ ನಾನು. ನಿಮ್ಮ ವ್ಯಾಪಾರ ಇನ್ನು ಸಾಕು"—ಎಂದಿದ್ದಳು. ಅಂದಿನಿಂದ ರಾಜ ಗಳಿಸುವ ಹವ್ಯಾಸದಲ್ಲಿ ಮನೆಯನ್ನು ಕಡೆಗಣಿಸಲಿಲ್ಲ. ಮಡದಿಯನ್ನು ಮರೆಯಲಿಲ್ಲ. ಅಂದಿನಿಂದ ಆ ಮನೆ ನಂದನವೇ ಆಗಿತ್ತು. ಬಳಗವೇ ಇಲ್ಲದೆ ಬೆಳೆದ ರಾಜನಿಗೆ ನೀರದೆಯೇ ಸರ್ವಸ್ವ. ಪರಾವಲಂಬಿಯಾಗಿ ಬೆಳೆದ ರಾಜ ಯಾರಿಗೂ ಒಂದು ಬಿರುಸು ಮಾತು ಆಡಿದವನಲ್ಲ. ವ್ಯಾಪಾರದಲ್ಲಿ ಬಂದದ್ದು—ಬರುವದು ತನ್ನ ಮಡದಿಗೂ ತೃಪ್ತಿಯಾದದ್ದು ಅವನ ಸುಖದ ಶಿಖರವಾಗಿತ್ತು. ಮನೆಯ ಸುಖ ಅವನಿಗೆ ಬಯಸುವ ಮೊದಲೇ ಬಡಿಸಿದ ಎಡೆಯಂತೆ ಮುಂದಿರುತ್ತಿತ್ತು. ತನಗೇನು ಬೇಕೆಂಬುದು ಅವನಿಗೆ ತಿಳಿಯಬೇಕಾಗಿಯೇ ಇರಲಿಲ್ಲ. ನೀರದೆ ತನ್ನ ರುಚಿಗೆ ಅವನನ್ನು ತಿದ್ದಿದಳು. ಮೂರು ಹೊತ್ತೂ ಅವಳನ್ನು ಹೊಗಳುತ್ತ ಇರುವದೊಂದೇ ಅವನಿಗೆ ತಿಳಿದ ಕೆಲಸ.

ಹೆಣ್ಣಿನದು ಹೊಗಳಿಕೆಗೆ ಮೈಮರೆಯುವ ಸ್ವಭಾವ. ಸಂತತವಾಗಿ ಹೊಗಳಿಸಿಕೊಂಡರೂ ತೃಪ್ತಿಪಡದ ಜೀವ—ಹೆಣ್ಣು. ಆದರೆ ನೀರದೆಗೆ ಆ ಸುಖ ಬಯಕೆಯ ಮುನ್ನವೇ ಸಿದ್ಧಿಸಿತ್ತು. ಮತ್ತೆ ಮತ್ತೆ ಹೊಗಳಿಸಿಕೊಂಡು ಅವಳಿಗೆ ಸಾಕಾಗಿ ಹೋಗಿತ್ತು. ಮನೆಯಲ್ಲೂ ಯಾವ ಕೊರತೆಯಿಲ್ಲ. ಜೀವಕ್ಕೆ ಬರೀ ಸುಖವೂ ಸಾಲದು. ಆದರ ಬೆಲೆ ಅಸುಖದ, ಬೇಸರದ ವ್ಯತ್ಯಾಸದಿಂದ ವೇದ್ಯವಾಗಬೇಕು. ಅಣ್ಣನ ಮನೆಯಲ್ಲಿ ನೋಡುತ್ತಾಳೆ: ಶಾರದೆ ಸತೀಶನನ್ನು ಎಷ್ಟು ಪರಿಯಿಂದ ನೋಡಿಕೊಂಡರೂ ಅವನಿಗೆ ಅವಳನ್ನು ಒಂದಿಷ್ಟು ಕಾಡದೆ, ಬಯ್ದು—ಅನ್ನದೆ ಊಟ ರುಚಿಸುವದಿಲ್ಲ. ಒಮ್ಮೊಮ್ಮೆ ನೀರದೆ ಅಣ್ಣನ ವೃಥಾ ಪೀಡನೆಯನ್ನು ಕಂಡು ಅವನೊಡನೆ ಜಗಳವಾಡಿದ್ದಾಳೆ. 'ತಾನೆಷ್ಟು ಸುಖಿ' ಎಂದುಕೊಂಡಿದ್ದಾಳೆ ಆದರೆ ಅತ್ತಿಗೆಯ ನಗು—ಅಳುಗಳ ಏರು—ಇಳಿತಗಳನ್ನು, ಅವುಗಳ ಕ್ಷಣಿಕತೆಯನ್ನು ಕಂಡು ಬೆರಗಾಗುತ್ತಾಳೆ. 'ಥೂ. ಅಭಿಮಾನವಿಲ್ಲದ ಹೆಣ್ಣು ಅತ್ತಿಗೆ. ಸುಮ್ಮಸುಮ್ಮನೆ ಕೊರೆಯುವ ಅಣ್ಣನ ಮಾತುಗಳನ್ನು ಕೇಳಿ ಒಂದಿಷ್ಟೂ ಕರುಬದೆ ಮತ್ತೆ ಅವನ ತಾಳಕ್ಕೆ ಥಕಥೈ ಮಾಡುತ್ತಾಳೆ. ಇವರು ನನಗೆ ಹಾಗೆಂದರೆ ಅವರನ್ನೇ ಕುಣಿಸಿಬಿಟ್ಟೇನು. ಏನು ? ಹೆಣ್ಣು ಅಷ್ಟು ವ್ಯಕ್ತಿತ್ವಹೀನೆಯಾಗಿಯೇ ಬಾಳಬೇಕೇ ?'—ಎಂದುಕೊಳ್ಳುತ್ತಾಳೆ. ಆದರೆ ಅವನು ಅವಳ ತಾಳಕ್ಕೆ ಕುಣಿಯುತ್ತಲೇ ಇದ್ದಾನೆ.

ಒಮ್ಮೊಮ್ಮೆ ನೀರದೆಗೆ ತನ್ನ ಸ್ವಭಾವದ ಬಗೆಗೇ ಬೇಸರವಾಗುವದುಂಟು. ತನ್ನನ್ನು ಇಷ್ಟು ಪ್ರೀತಿಯಿಂದ ಕಾಣುವ ಪತಿಗೆ ತಾನು ಕಾರಣವಿಲ್ಲದೆ ಕೆಣಕಿ ನುಡಿಯುತ್ತಾಳೆ. ಆದರೂ ಅವನು ಕೆರಳುವದಿಲ್ಲ. ಅವಳ ಮಾತಿಗೆಲ್ಲಕ್ಕೂ ಅವನು ಮುಗುಳು ನಗುತ್ತಾನೆ. ಅದು ಯಾವ ಕಲಂಕವೂ ಇಲ್ಲದ ಮುಕ್ತಹಾಸ. ಅವನ ಆ ನಗೆ ಅಪಹಾಸವಾಗಿ, ತಾನು ಪ್ರತಿಯಾಡಿದ್ದರೆ ಅವನೂ ಮತ್ತೆ ನಾಲ್ಕು ಮಾತನಾಡಬೇಕೆಂಬ ಅವಳ ಅವ್ಯಕ್ತ ಬಯಕೆಗೆ ಅವಕಾಶವೇ ಇಲ್ಲ. ವ್ಯಕ್ತಿತ್ವವನ್ನೇ ಪ್ರಸ್ಥಾಪಿಸಲಾರದ ತನ್ನ ಪತಿಯ ನಡೆವಳಿಕೆ ಅವಳಿಗೆ ಒಮ್ಮೊಮ್ಮೆ ಸಪ್ಪೆ ಸಪ್ಪೆಯಾಗಿ ಕಾಣುತ್ತದೆ. ತನ್ನ ಜೀವನ ನಿಂತ ನೀರಾಗಿದೆಯಲ್ಲ ! ಇದು ಹರಿದರೂ ತನ್ನ ಯೋಜನೆಯ ಕಲ್ಪಿತ ಕಾಲುವೆಯಲ್ಲಿ ಕ್ರಮವಾಗಿ ಹರಿವ ನೀರಂತೆ ಅಂಕು–ಡೊಂಕಿಲ್ಲ. ದಂಡೆಯ ಕೊರೆತವಿಲ್ಲ. ಮಣ್ಣಿಲ್ಲ; ರಾಡಿಯಿಲ್ಲ. ಈ ತಿಳಿ–ತಿಳಿಯಾದ ಲೆಕ್ಕದ ನೀರಿನ ಪ್ರವಾಹ ಯಾರ ಸುಖಕ್ಕೆ ?

ರೇಖಾ ಅದೇ ಹುಟ್ಟಿದಾಗ ಆ ಮಗುವಿನ ನಗು-ಅಳು, ಹಟ-ಆಟಗಳು ಅವಳನ್ನು ರಮಿಸಿದ್ದವು. ಬರೀ ನಗುವ ಮಗಳನ್ನು ಕಂಡು ಅವಳಿಗೆ ದೃಷ್ಟಿಯಾದೀತೆಂದು ಅಳಿಸುತ್ತಿದ್ದಳು. ಅಳುವ ಮಗುವಿಗೆ ಸಿಟ್ಟು ಬರಿಸಬೇಕೆಂದು ಕೆಣಕುವಳು. ಇವಳ ಹುಚ್ಚಿಗೆ ದಣಿದು, ಮಗು ನಿದ್ದೆ ಮಾಡಿದರೆ, ಅದರ ಮುಖವನ್ನೇ ನೋಡುತ್ತ ಬಾಚಿ ಓರಣ ಮಾಡಿದ ಅವಳ ತಲೆಗೂದಲನ್ನು ಕೆದಕಿ ಪೊದೆಪೊದೆ ಮಾಡಿ ಆಗಿನ ' ಒಪ್ಪ ' ವನ್ನು ಕಂಡು ಮನದುಂಬಿದ ಪ್ರೀತಿಯನ್ನು ಮುತ್ತಾಗಿ ಹರಿಯಿಸಿ, ನಿದ್ರಿಸಿದ ಮಗುವನ್ನು ಎಬ್ಬಿಸಿ, ಅಳುವನ್ನು ರಮಿಸಿ ಎದೆಗವಚಿಕೊಂಡು ಲಾಲಿ ಹೇಳುವಳು. ಸಮಯವನ್ನು ಹೀಗೆಯೇ ತುಂಬಿಕೊಳ್ಳಬೇಕಲ್ಲಾ—ಎಂದು ಒರಗಿಕೊಂಡರೆ ಹಗಲು ನಿದ್ರೆಯ ಅಭ್ಯಾಸವಿಲ್ಲದೆ ಮೈ ಜಡವಾಗುವದು. ಎದ್ದು ತೋಟದಲ್ಲಿ ಅಲ್ಲಿ–ಇಲ್ಲಿ ಓಡಿಯಾಡಿ ದಣಿಯುವಳು. ಮನೆಗೆ ಬಂದ ಪತಿಯನ್ನು ' ಇಷ್ಟು ತಡವೇಕೆ— ' ಎಂದು ಆಕ್ಷೇಪಿಸುವಳು. ನೀನು ಹೇಳಿದ ಸಮಯಕ್ಕೇ ಬರುತ್ತಿದ್ದೇನಲ್ಲಾ — ' ಎಂದವನೆಂದರೆ ' ಇಂದು ನನಗೆ ಬೇಸರವಾಗಿತ್ತು. ನಿಮಗದು ಯಾಕೆ ತಿಳಿಯಬಾರದು ? ' ಎನ್ನುತ್ತಾಳೆ. ' ನಾಳೆ ಬೇಗ ಬರುತ್ತೇನೆ ನೀರೂ '—ಎಂದವನು ರಮಿಸುತ್ತಾನೆ.

ಮರುದಿನ ಅವಳಿಗೆ ಪತಿ ಬೇಗ ಬಂದನಲ್ಲಾ ಎಂದೇ ಬೇಸರವಾದರೆ ಆಶ್ಚರ್ಯಪಡಬೇಕಾಗಿಲ್ಲ.

* * * *

ಹೀಗೆ ನೀರದೆ ನಿಷ್ಕಾರಣವಾಗಿ, ಅವ್ಯಕ್ತವಾಗಿ ನೋವು-ಕೊರತೆಗಳನ್ನು ತನಗೆ ತಿಳಿಯದಂತೆಯೇ ನಿರ್ಮಿಸಿಕೊಳ್ಳುತ್ತಾಳೆ. ಅವುಗಳಿಂದ ಪಡೆದ ಅತೃಪ್ತಿಯಿಂದಲೂ ಅವಳು ತೃಪ್ತಳು. ಆ ನೋವಿನಲ್ಲಿ ಅವಳು ನಲವನ್ನು ಕಾಣುತ್ತಾಳೆ. ಆ ನೆರಳಿನ ಬೆಳಕಿಗೆ, ಕಹಿಯ ಸಿಹಿಗೆ, ಯಾತನೆಯ ಸುಖಕ್ಕೆ ರಾಜ ಕಾರಣನಾಗಬಾರದೇ ಎಂದು ಅವಳ ಮನಸ್ಸು ಸದಾ ತವಕಿಸುತ್ತದೆ. ಅವಳು ಅಣ್ಣನಲ್ಲಿ ಗಂಡನ ಬಗ್ಗೆ ಚಾಡಿ ಹೇಳುವದೆಂದರೆ—'ಇವರಿಂದ ಎರಡು ಬೈಗಳನ್ನು ಕೇಳಿದ ದಿನ ನಾನು ತೃಪ್ತಳು. ಬರೀ ಪ್ರೀತಿ ಹೊಗಳಿಕೆಗಳಿಂದ ನನಗೆ ಸಾಕಾಗಿದೆ-ಅಣ್ಣ. ಮೊನ್ನೆ ಬಂದ ಅತ್ತಿಗೆ ನಿನ್ನಿಂದ ಎಷ್ಟು ಚಂದವಾಗಿ ಅನ್ನಿಸಿಕೊಳ್ಳುತ್ತಾಳೆ! ನನಗೆ ಆ ಭಾಗ್ಯವಿಲ್ಲದೆ ಹೋಯಿತಲ್ಲಾ—' ಎಂಬುದೇ.

ಈ ಅಣ್ಣನ ಕೊರಗೂ ಅಂಥದೇ. 'ಶಾರದೆ ಬುದ್ಧಿಯಿಲ್ಲದ ಹೆಣ್ಣು; ಕೇವಲ 'ಪಾಯಾಚೀ ದಾಸೀ.' ನೀರದಾ ಗಂಡನಿಗೆ ಅನ್ನುವಂತೆ ನನಗಿವಳು ಒಮ್ಮೆಯಾದರೂ ಸಿಡಿನುಡಿಯಬಾರದೆ'—ಎಂಬುದು ಅವನ ತೃಪ್ತಿಯಲ್ಲಿಯ ನೋವು.

ಕಾವೇರಮ್ಮನ ಮಕ್ಕಳಿವರು. ಬೈಗಳು ಆಡಿಗೊತ್ತೇ ಹೊರತು, ತಿಂದವರಲ್ಲ. ಅವರಿಗದೇ ಚಡಪಡಿಕೆ.

## ೩

ಒಮ್ಮೆ ನೀರದೆ ಎದ್ದು ಕೂಡಬೇಕಾಯಿತು. ಕೆಲಸದಾಕೆ ಬಂದು ಕರೆದಳು. ಎದ್ದು ನೀರದೆ ಮುಖ ಒರಸಿಕೊಂಡು, ತಲೆಗೂದಲು ಉಗುರಿಸಿಕೊಂಡು ಅಣ್ಣನನ್ನು ಒಮ್ಮೆ ಹುಸಿನಗೆಯಿಂದ ನೋಡಿದಳು. ಸತೀಶನೂ ಅಚ್ಚರಿಯಿಂದ ಮುಗುಳು ನಕ್ಕ.

"ಬಾಯೀ, ಭಾಂಡೀ ಹಾಕಿರಿ."

—ಎಂದು ಕೆಲಸದಾಕೆ ಕಲ್ಯಾಣಿ ಕರೆದಾಗ ನೀರದೆ ತನ್ನ ಸೋತ ಶರೀರವನ್ನು ಹೊತ್ತು ನಿಂತು, ಎಲ್ಲಿಯದೋ ಉತ್ಸಾಹ ಬರಮಾಡಿಕೊಂಡು, ನಗೆ ಎಳೆದು ತಂದು ಅಲ್ಲಿಂದಲೇ ' ಕಲ್ಯಾಣಿ ' ಎಂದು ಕರೆದಳು.

" ಬಾಯೀ "— ಎಂದವಳು ಎದುರು ಬಂದವಳು ಸತೀಶನನ್ನು ನೋಡಿ ಬದಿಗೆ ಸರಿದಳು.

" ಕಲ್ಯಾಣಿ, ಇಂದು ನಿನಗೆ ಭಾಂಡಿ ಇಲ್ಲ; ಚಹವೂ ಇಲ್ಲ. " ಎಂದು ನೀರದೆ ಹೇಳಿದಾಗ ಕಲ್ಯಾಣಿ ತನ್ನೊಡತಿಯ ಮುಖ ನೋಡಿದಳು. ನೀರದೆ ಅದನ್ನು ಎದುರಿಸಿ ತನ್ನ ಕೆಂಪಾದ ಮುಖ, ಊದಿದ ಕಣ್ಣು ತೋರಗೊಡದೆ,

" ನೀನು ಹೋಗು ಕಲ್ಯಾಣಿ, ಒಂದು ದಿನ ಚಹಾ ತಪ್ಪ ಬಾರದು ನಿನಗೆ."

—ಎಂದು ಸಿಡಿನುಡಿದಳು.

" ಭಾಂಡಿ ಯಾಕ ಇಲ್ಲ ಬಾಯೀ. "

" ನಿನ್ನೆ ಅಣ್ಣನ ಮನೆಯಲ್ಲಿ ನಮ್ಮ ಊಟವಾಗಿದೆ. ಇಂದು ನಿನಗೆ ಕೆಲಸವಿಲ್ಲ. ಒಮ್ಮೆ ಹೋಗಿಬಿಡು ಕಲ್ಯಾಣಿ, ನಾಳೆ ನಿನಗೆ ಎರಡು ಕಪ್ಪ ಚಹಾ—ಹೂಂ—ಹೊರಡು. "

—ಎಂದು ಹೇಳಿ, ಸತೀಶನತ್ತ ನೋಡಿ ಕಣ್ಣು ಚಿವುಟಿ ನಕ್ಕಳು.

" ನೀರದಾ, ಶಾರದೆ ಹೇಳಿದ್ದು ನಿಜವಾಯಿತು—ನೋಡು. "

" ಏನಣ್ಣ ? "

" ನಿನ್ನೆಯಿಂದ ನಿಮಗೆ ಎಚ್ಚರವೇ ಇಲ್ಲವೆಂದಳು. "

" ಯಾರಿಗೆ ? "

" ಮತ್ತೆ ಯಾರಿಗೆ ? ನನಗೆ ? "

" ಯಾಕೆ ? "

" ರೇಖಾ ಅಂಥ ನಸುಕಿನಲ್ಲಿ ನಮ್ಮ ಮನೆಗೆ ಬಂದಳು. ನಿನ್ನೆ ಇಲ್ಲಿಯೇ ಮಲಗಿದ್ದಳೇನು—ಎಂದು ಕೇಳಿದರೆ, ಹಾಗಿದ್ದರೆ ನಿಮಗೆ ತಿಳಿಯದಿರು ತ್ತಿತ್ತೇ—ಎನ್ನುತ್ತಾಳೆ. ಮತ್ತೆ ನೀನು ಕಲ್ಯಾಣಿಗೆ ಹೇಳುತ್ತೀ: ನಿನ್ನೆ ಅಣ್ಣನ ಮನೆಯಲ್ಲಿ ಊಟವಾಯಿತೆಂದು. ಏನೋ ಹುಡುಗಾಟ ನಡೆಸಿದ್ದೀರಿ. ನಿನ್ನೆ ನಾನು ಮನೆಗೆ ಬಂದಾಗ ರಾತ್ರಿಯಾಗಿತ್ತು. ಏನೋ ಹರಟುತ್ತ ಮೈಲಾರದ ದಾರಿಯಲ್ಲಿ ಸುತ್ತಿಕೊಂಡು ಬಂದೆ. ರಾತ್ರಿ ನಿದ್ರೆಯೇ ಇಲ್ಲ. ಎಂಥ ಹಾಳು

ಕನಸು ನೀರದಾ ! ಅಂತೂ ನನಗೇನೋ ಆಗಿದೆ. ನನಗೆ ಎಂಥ ಎಚ್ಚರಗೇಡಿ ತನ ಬಂತಲ್ಲ ನೀರದಾ. "

" ನೀನೊಬ್ಬ ! ಸುಮ್ಮನಿರಣ್ಣ, ಏನಾದರೊಂದು ! "

" ಅದಾಯಿತು; ನಿನಗಾದದ್ದಾದರೂ ಏನು ನೀರದಾ ? "

ಮತ್ತೆ ನೀರದೆಯ ಕಣ್ಣಂಚಿನಲ್ಲಿ ನೀರೂರಿತು. ಎಳೆದು ತಂದ ನಗು ಮಾಯವಾಗಿ ಮುಖ ಮೋಡಗವಿದ ಮುಗಿಲಿನಂತಾಯಿತು. ನೀರದಾ ಕಾಲೆ ಳೆದುಕೊಂಡು ಮಂಚಕ್ಕೆ ನಡೆದು ಬೇಸರದಿಂದ ಏರಿ ಕುಳಿತು ಅಂದಳು :

" ಅವರನ್ನೇ ಕೇಳಣ್ಣ. "

" ಅವನಿಲ್ಲದಾಗ ಕರೆಸಿ, ಅವನನ್ನೇ ಕೇಳು ಎನ್ನುವಿಯಲ್ಲ ? "

" ಎಂದೂ ಅವರಿಂದ ಕೇಳಲಾರದ, ಕೇಳಬಾರದಂಥ ಕೊಳಕು ಮಾತು ಆಡಿದರು ಅಣ್ಣ. ಈ ಮನೆಗೊಂದು ಬಾವಿಯಿದ್ದಿದ್ದರೆ ನಿನ್ನೆ ರಾತ್ರಿ ನಾನು ಇಲ್ಲಿಂದಲೇ ನಿನ್ನನ್ನು ನೆನಸಿ ಪ್ರಾಣ ನೀಗುತ್ತಿದ್ದೆ. ಆದರೆ....ಕಾವೇ ರಮ್ಮನ ಮಗಳು; ಸತೀಶನ ತಂಗಿ ಅಂಥ ದುರ್ಮರಣಕ್ಕೆ ತುತ್ತಾದಳೆಂದು ಜನ ಆಡಿಕೊಂಡಾರೆಂದು........

" ನೀನು ಅತ್ತಿಗೆಯನ್ನು ಬೈಯುತ್ತೀ; ನಾನು ಕೇಳಿದ್ದೇನೆ. ಇಂಥ ಹೊಲಸು ಮಾತು ನೀನೆಂದಿಗೂ ಆಡಿರಲಾರಿ; ಯಾರೂ ಹೆಂಡತಿಗೆ ಆಡ ಲಾರರು ಮೂರು ಹೊತ್ತೂ ಹೊಗಳಿದ ಇವರ ಬಾಯಿಗೆ ಇಂಥ ಮಾತು ಬರಬೇಕೆಂದರೆ !........ನಾನು ಇಲ್ಲಿ ಇನ್ನು ಇರಲಾರೆನಣ್ಣ. ನಿನ್ನ ಮನೆಯಲ್ಲಿ ನನಗೆ ಸ್ಥಳವಿಲ್ಲವಾದರೆ ಹೇಳು. ಯಾವುದಾದರೂ ಒಂದು ಆಶ್ರಮದ ಆಶ್ರಯ ವಾದರೂ ನನಗಿಲ್ಲವೆ? ನೂರು ಜನ ಸಾವಿರ ಮಾತಾಡಲಿ. ನನ್ನ ಈ–ಇವರು ಹೀಗೆ ಕೊಳಕು ನುಡಿ ಆಡಬಹುದೇ ?........ನನ್ನ ಕರ್ಮ. ನಿನ್ನೆ ರಾತ್ರಿ ನಿನ್ನನ್ನು ಕರೆಸಬೇಕೆಂದೆ. ಬಾಗಿಲಿಗೆ ಅಡ್ಡಿಯಾಗಿ ನಿಂತು, ನಿನಗೂ ಸ್ವರ್ಗ ದಲ್ಲಿರುವ ಅಮ್ಮನಿಗೂ ಇವರು ಆಡಿದ ಮಾತುಗಳೋ !....ಸಾಕು; ನನಗಿನ್ನು ಈ ಸಹವಾಸವೇ ಸಾಕು. "

ಮಾತು ತುಂಡುತುಂಡಾಗಿ ಬರುತ್ತಿತ್ತು. ಮಧ್ಯೆ ಮಧ್ಯೆ ಉದ್ವೇಗದಿಂದ ದನಿ ನಡುಗುತ್ತಿತ್ತು. ಗಲ್ಲದ ಮೇಲೆ ಧಾರೆಯಾಗಿ ನೀರು ಇಳಿಯುತ್ತಿತ್ತು.

ಮತ್ತೆ ಜೋರಲಾಗಿ ಹಾಸಿಗೆಯ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅಳತೊಡಗಿ ದಳು—ನೀರದೆ.

"ಎಂಥ ಕೆಟ್ಟ ಕನಸು !"

—ಸತೀಶ ಜಂತೆಯ ಗಳ ಎಣಿಸುತ್ತ ಮಾತನಾಡಿದ.

"ಕನಸಲ್ಲವಣ್ಣ—ನಡೆದದ್ದು. ನಿನ್ನೆ ರಾತ್ರಿ ಈ ನಿನ್ನ ತಂಗಿ ಆಡಿಸಿ ಕೊಂಡದ್ದು. ಆಕೆಯ ಗಂಡ—ಜನಕ್ಕೆ ಬೇಡದ ಮಾತು ಮಾರುತ್ತೀ ಎಂದು ನಿನಗೆ ಆಡಿದ ರಾಜೇಂದ್ರ—ಆಡಿದ್ದು."

—ಕುದಿವ ಸಿಟ್ಟನಿಂದ ಬಿದ್ದಲ್ಲಿಂದಲೇ ಚೀರಿದಳು ನೀರದೆ.

"ಕನಸು ನಿನ್ನದಲ್ಲ ತಂಗೀ, ನನ್ನದು—ನಿನ್ನೆ ರಾತ್ರಿ ನಾ ಕಂಡ ದುಃಸ್ವಪ್ನ. ಎಂಥ ಜನ! ಎಂಥ ಮಾತು!"

"ನಿನ್ನ ಕನಸು ಬೇಡ ಹೋಗು. ಅದಕ್ಕೆ ನಿನ್ನನ್ನು ಕರೆಸಲಿಲ್ಲ."

"ಕನಸು ನನಗೆ ಬಿದ್ದದ್ದು ನೀರದಾ. ಆದರೆ ನಡೆದದ್ದು ನಿನ್ನದೇ ಕಥೆ."

"ನನಗೆ ನಿನ್ನ ಕನಸಿನ ಕತೆ ಬೇಡವಣ್ಣಯ್ಯ........ನನ್ನದೇ ನನಗೆ ಸಾಕಾಗಿದೆ."

—ಕೂಗಿ ನುಡಿದ ನೀರದಾ ಮತ್ತೆ ಮುಸಿಮುಸಿ ಅಳತೊಡಗಿದಳು.

೪

ನೀರದೆಗೆ ತನ್ನ ಮ್ಲಾನ ವದನ ತೋರಿಸಿಯೇ ಗೊತ್ತಿಲ್ಲ. ಅವಳು ಬೇಸರ ದಲ್ಲಿದ್ದುದನ್ನು ಯಾರೂ ಕಂಡರಿಯರು. ಇಂದು ಅವಳು ಇಂಥ ಸ್ಥಿತಿಯಲ್ಲಿ ದ್ದಾಗ ಕೆಲಸದಾಕೆ ಬಂದಳು; ಹಾಲಿನವ ಬಂದ; ಇವಳನ್ನು ಹಾಡಿ ಹರ ಸುವ ಭಿಕ್ಷುಕ ಬಂದು ಇವಳನ್ನು ನೋಡಿಯೇ ಹೋಗುವೆನೆಂದು ಹಟ ಹಿಡಿದ; ಮಹಿಳಾ ಮಂಡಳದ ಕಾರ್ಯದರ್ಶಿನಿ ಬಂದಳು. ಇವರನ್ನೆಲ್ಲ ಕಂಡೂ ಕಾಣದಂತೆ, ಕಾಣದಿದ್ದರೂ ಕಂಡಂತೆ ನಾಟಕಮಾಡಿ, ಸುಳ್ಳು-ನೆಪಗಳನ್ನು ಹೇಳಿ ಅವರನ್ನೆಲ್ಲ ನಗುನಗುತ್ತಲೇ ಕಳಿಸಿಕೊಟ್ಟಳು. ಅದರಿಂದವಳಿಗೆ ತುಂಬ ದಣಿವು. ತಾನೇ ಕಟ್ಟಿಕೊಂಡ ಸಭ್ಯತೆಯ ಸೋಗಿನಿಂದ—ಅದರ ಬಂಧನ ದಿಂದವಳು ತುಂಬ ನೊಂದುಕೊಂಡಳು. ತನ್ನ ಮನೆಯಲ್ಲಿ ಮನಸೋಕ್ತ ವಾಗಿ ಅಳಲೂ ತನಗೆ ಸ್ವಾತಂತ್ರ್ಯವಿಲ್ಲವಲ್ಲ—ಎಂಬ ವಿಚಿತ್ರ ಕೊರಗಿಗೆ

ಅವಳು ಒಮ್ಮೆ ಅಳುತ್ತಾಳೆ; ಒಮ್ಮೆ ನಗುತ್ತಾಳೆ. ತಂಗಿಯ ಈ ಧರ್ಮಸಂಕಟವನ್ನು ಕಂಡ ಸತೀಶ ತುಂಬ ಕನಿಕರಪಟ್ಟ.

ರಾಜ ಇವಳಿಗೆ ಕಾರಣವಿಲ್ಲದೆ ಬೈಯುವವನಲ್ಲ. ಅಂಥ ಕಾರಣಗಳನ್ನು ಅವನಿಗೆ ನೀರದೆ ಬಿಟ್ಟುಕೊಡುವವಳೂ ಅಲ್ಲ. ಆದರೆ ಇಂದಿವಳು ನೊಂದುಕೊಳ್ಳುವಂತೆ, ಹಾಡಿಕೊಂಡು ಅಳುವಂತೆ ಅವನನ್ನ ಬೇಕಾದರೆ, ಅವನಂದ ಮಾತು ಇವಳಿಗೆ ಮರ್ಮಾಘಾತವಾಗಬೇಕಾದರೆ ಏನೋ ಅಚಾತುರ್ಯ ನಡೆದಿರಬೇಕು. ಆದರಲ್ಲಿ ಯಾರ ತಪ್ಪಿದೆಯೋ! ಅವನಂತೂ ಎದುರಿನಲ್ಲಿಲ್ಲ. ತಪ್ಪು ನೀರದೆಯದೇ ಇದ್ದರೂ ಅದನ್ನು ಈಗ ಅವಳಿಗೆ ಹೊರಿಸಿ ಆಡುವಂತಿರಲಿಲ್ಲ. ನೊಂದವರು ಅನ್ಯರಿಂದ ಸಹಾನುಭೂತಿಯನ್ನಲ್ಲದೆ ಉಪದೇಶವನ್ನು ಬಯಸುವದಿಲ್ಲ. ಯಾವುದನ್ನೂ ಅರಿಯದೆ ಸತೀಶ ತಂಗಿಗೆ ಏನೆಂದು ಸಾಂತ್ವನದ ನುಡಿಯಾಡಬೇಕೆಂದೂ ಅರಿಯದಾದ. ರಾಜ ಆಡಿದನೆಂದು ಹೇಳುವ ಹೊಲಸು ನುಡಿಗಳ ಪುನರುಚ್ಚಾರ ಅವನಿಗೆ ಬೇಕಿಲ್ಲ. ಕಾರಣವಿಲ್ಲದೆ ಅವನಂಥ ಮಾತುಗಳನ್ನಾಡಬಹುದೆಂದೂ ನಂಬಲಾರದ ಸತೀಶ ರಾಜನನ್ನು ಏನೆಂದು ಬೈಯಬೇಕು? ಇದೇ ನೀರದೆ—ತನ್ನ ತಂಗಿ ಗಂಡನಿಗೆ ತನ್ನೆದುರೇ ಹತ್ತು ಮಾತು ಆಡಿದ್ದಾಳೆ. ಆದರೆ ವಿನೋದಕ್ಕೆಂದು ಯಾರಾದರೂ ಒಂದು ಮಾತು ರಾಜನಿಗೆ ಅಂದರೆ—ಅವಳ ಅಣ್ಣನಾದ ತಾನು ಅಂದರೂ—ಅವಳು ಸಹಿಸುವವಳಲ್ಲ. ಹಿಂದೊಮ್ಮೆ ಹೀಗೇ ಆಗಿತ್ತು: ರಾಜನ ಹಣದ ಹಸಿವನ್ನು ತಾನು ಹಾಸ್ಯಕ್ಕೆ ಗೇಲಿ ಮಾಡಿದಾಗ—"ಇವರು ನಿನ್ನಂತೆ ಹೆಂಡತಿಯನ್ನು ಕೆಲಸದಾಕೆಯಂತೆ ಇಡಲಿಲ್ಲವಲ್ಲ?" ಎಂದು ನೀರದೆ ಆಡಿದ ಮಾತು ಸತೀಶನಿಗೆ ಗಾಯವನ್ನೇ ಮಾಡಿತ್ತು. ಆದರೆ ಕ್ರಮೇಣ ತಂಗಿಯ ಪ್ರೀತಿಯ ದುಡುಕನ್ನು ಅರಿತು ಮನ್ನಿಸಿದ್ದನಾದರೂ ಆ ಮಾತನ್ನು ಶಾರದೆಯ ಮುಂದೆ ಮರೆತೂ ಆಡಲಾರದವನಾಗಿದ್ದ.

ಇತ್ತ ಮಂಚದ ಮೇಲೆ ಬೊರಲಾಗಿ ಬಿದ್ದು ಅಳುವ ನೀರದೆ ಒರೆಯಾಗಿ ಅಣ್ಣನನ್ನೇ ನೋಡುತ್ತ ಅವನಿಂದ ಏನನ್ನೊ ಬಯಸುತ್ತಲಿದ್ದಾಳೆ.

ಆಗ 'ಗಾಯತ್ರೀ ಭವನ'ದ ಆಳು ಊಟದ ಡಬ್ಬಿಯನ್ನು ಹೊತ್ತುಕೊಂಡು ಬಾಗಿಲಲ್ಲೇ ನಿಂತು ಕೂಗಿದ:

"ಬಾಯೀ, ರಾಯರು ಎರಡು ಊಟ ಕಳಿಸಿದ್ದಾರೆ: ಮತ್ತೆ ಈ ಪತ್ರ!"

ನೀರದೆ ಚಂಗನೆದ್ದು ಬಾಗಿಲಿಗೋಡಿ ಪತ್ರ ಇಸಿದುಕೊಂಡಳು. ಊಟದ ಡಬ್ಬಿಯನ್ನು ಒಳಗೆ ಇಟ್ಟುಹೋಗಲು ಹೇಳಿದಳು.

ಸತೀಶ ಸೆರೆಯಿಂದ ಬಿಟ್ಟವನಂತೆ ಕಾಲು ಚಾಚಿ ಕುಳಿತು ಉಸಿರೆಳೆದ. ನೀರದೆ ಅಟ್ಟಕ್ಕೋಡಿದವಳು ಐದು ನಿಮಿಷಕ್ಕೆ ಇಳಿದು ಬಂದು ನುಡಿದಳು:

" ಅಣ್ಣ, ಇದು ಅವರ ಪತ್ರ. ನಾನಿದನ್ನು ಒಡೆಯಲಾರೆ; ಓದಲಾರೆ. ........ಗಾಯತ್ರೀಭವನದ ಊಟ ಈ ಮನೆಗೆ ಇಂದೇ ಬಂದುದಲ್ಲ. ಅದನ್ನು ತಿರುಗಿ ಕಳಿಸಲಾರೆ. ಇವರು ಅಲ್ಲೇ ಇರಬೇಕು. ಆಡುವದನ್ನಾಡಿ ಈ ನಾಟಕವನ್ನು ಮಾಡಬೇಕಾಗಿದೆ ಅವರಿಗೆ. ಇರಲಿ. ಈಗ ಏನು ಮಾಡುವದು ? "

" ಆ ಪತ್ರ ಒಡೆದು ಓದು. ನಂತರ ಮುಂದಿನ ವಿಚಾರ. "

" ಅದರಲ್ಲೇನು ಹೊಲಸಿದೆಯೋ ಮತ್ತೆ ! ನಾನಿದನ್ನು ಒಡೆಯಲಾರೆ, ಓದಲಾರೆ. "

" ಒಂದು ಹೊಲಸನ್ನು ಕೇಳಿದ್ದೀ. ಇದರಲ್ಲಿ ಏನಿದ್ದರೂ ನೀನು ಸಹಿಸಬೇಕು—ಬಿಡು. ನಾನೇ ಗಾಯತ್ರೀ ಭವನಕ್ಕೆ ಹೋಗಿ ಅವನನ್ನು ಕರೆತರುತ್ತೇನೆ. "

" ನೀನು ಹೋಗಬೇಕಿಲ್ಲ ಸತೀ. ನಾನಿಲ್ಲೇ ಇದ್ದೇನೆ "

—ಎನ್ನುತ್ತ ರಾಜ ಒಳಕ್ಕೆ ನುಗ್ಗಿ ಬಂದ.

ಅಂಗೈಯಲ್ಲಿ ರಾಜನ ಪತ್ರವನ್ನು ತೂಗುತ್ತ ನಿಂತ ನೀರದೆ ಅದನ್ನು ಅವನ ಮುಖಕ್ಕೆಸೆದು ಸತೀಶನಿಗೆಂದಳು:

" ಅಣ್ಣ, ಏಳಿನ್ನು; ನಾನಿಲ್ಲಿರಲಾರೆ. "

" ರಾಜ, ನಿನ್ನ ಪತ್ರ ನೀನೇ ಓದಿ ಹೇಳಬೇಕಾಗಿದೆ. "

" ಅದರಲ್ಲಿ ಓದುವಂಥದೇನೂ ಇಲ್ಲ ಸತೀ. ನಮ್ಮ ಜಗಳದಂತೆ ಅದು ಖಾಲೀ ಕಾಗದದ ಪತ್ರ. ನೋಡು ಸತೀ, ನಾಲ್ಕು ವರುಷಗಳಿಂದ ನಾನು ಮಾಡಿದ ಸನ್ನಾಹ ಇಂದು ಫಲಿಸಿತು. ನೀರೆ ಸಿಟ್ಟಿಗೇಳುವುದು ಅಪೂರ್ವವಲ್ಲ. ಆದರೆ ಅದಕ್ಕೆ ಕಾರಣಗಳನ್ನು ಅವಳೇ ಹುಟ್ಟಿಸಿಕೊಳ್ಳುತ್ತಾಳೆ. ಆದರೆ ನನ್ನ ಮಾತು ಅವಳ ಸಿಟ್ಟಿಗೆ ಕಾರಣವಾಗಬೇಕೆಂದು ಅವಳು ಬಯಸಿದ್ದಳು; ನಾನೂ ಯತ್ನಿಸುತ್ತಿದ್ದೆ. ಮಾತಿಗೆ ಪ್ರತಿ ಮಾತು ಅವಳದು ಸಿದ್ಧವಾಗಿಯೇ ಇರುತ್ತದೆ. ಅವಳು ಎದುರು ಆಡಿರಬಾರದು—ಅಂಥ ಮಾತನ್ನು ನಾನು ಕಲಿಯು

ಬೇಕಿತ್ತು. ಕನ್ನಡ ಶಬ್ದಕೋಶಗಳಿಗೆ ಶರಣು ಹೋಗಿ ಕೆಲವು ವಾಕ್ಯಗಳನ್ನು ಸೃಷ್ಟಿಸಿಕೊಂಡೆ. ಅವುಗಳನ್ನು ಒಂದೇಸಲ ಉಚ್ಚರಿಸುವುದರಿಂದ ನನ್ನ ಗುರಿ ಸಿದ್ಧಿಸಿತು. ಆ ಮಾತನ್ನು ಅವಳು ನಿನ್ನೆದುರು ಹೇಳಿರಲಾರಳು. ನಾನೂ ಇನ್ನೊಮ್ಮೆ ಅನ್ನಲಾರೆ. ಕನ್ನಡ ಶಬ್ದಸಂಪತ್ತು ನನ್ನ ಕೈ ಹಿಡಿಯದಿದ್ದರೆ ನಾನು ಇವಳ ಗಂಡನಾಗಿ, ಇವಳು ಎದುರಾಡದಂತೆ ಬಾಯಿಥಡಿ ಮಾಡುವುದು ಸಾಧ್ಯವಿತ್ತೆ ? ಇಂಥ ಮಾತು ನಾಟಬೇಕಾದರೆ ನಾನು ಪ್ರೀತಿಯಿಂದ ಹದಗೊಳಿಸಿದ ನೀರೆಯ ಮನೋವಲಯವೇ ಆಗಬೇಕಿತ್ತು........ "

ನಡುವೆಯೇ ಬಾಯಿ ಹಾಕಿ ನೀರದೆಯೆಂದಳು :

" ನಾಚಿಕೆಯಿಲ್ಲದವರು ! "

ಸತೀಶನೆಂದ :

" ಇಬ್ಬರೂ "

ರಾಜನೆಂದ :

" ಮೂವರೂ. "

# ಜಾಗೀರಿಯ ದಿಂಬು

ಕೇಶಪ್ಪನಿಗೆ ನಿದ್ರೆಯೇ ಬಂದಿಲ್ಲ. ರಾತ್ರಿ ಎರಡು ಗಂಟೆಯಾಗಿದೆ. ತನ್ನ ಜೀವನದ ಈ ಸಂಧ್ಯಾಕಾಲದಲ್ಲಿ ಹಿಂದಿನ ಘಟನೆಗಳು ಒಂದೊಂದಾಗಿ ಚಿತ್ತಭಿತ್ತಿಯಮೇಲೆ ಚಿತ್ರಿತವಾಗಿ ಸರಿಯುತ್ತಿವೆ.

ಕೊಪ್ಪದ ಜಾಗೀರಿಯಲ್ಲಿ ಬಂದು ಊಳಿಗಕ್ಕೆ ನಿಂತಾಗ ಮೈಮೇಲೆ ಚಿಂದಿಬಟ್ಟೆ. ಮನೆಯಲ್ಲಿ ಗಡಿಗೆ-ಮಡಕೆಗಳೇ ಪಾತ್ರೆ-ಪಡಗ. ದಿಕ್ಕಿಲ್ಲದೆ ದೇಸೂರನ್ನು ಬಿಟ್ಟುಬಂದು ಜಾಗೀರದಾರರಲ್ಲಿ ಕಮತದ ಮೇಲ್ವಿಚಾರಕನೆಂದು ನಿಂತದ್ದು, ಅದೇ ವರುಷ ಮಳೆ-ಗಾಳಿಗಳ ಅನುಕೂಲದಿಂದ ಫಸಲು ಚೆನ್ನಾಗಿ ಬಂದದ್ದು, ಜಾಗೀರಿಯ ಕಣಜಗಳೆಲ್ಲ ತುಂಬಿ ತನ್ನ ಮೇಲ್ವಿಚಾರಣೆಯ ತಾರೀಫು ನಡೆದದ್ದು, ಜಾಗೀರದಾರರಿಂದ ಭಲೆ ಎನ್ನಿಸಿಕೊಂಡು ಹತ್ತು ಎಕರೆ ಜಮೀನು ಉಂಬಳಿಯಾಗಿ ಪಡೆದದ್ದು-ಒಂದೊಂದಾಗಿ ಕಣ್ಣಮುಂದೆ ಸರಿದವು.

ಹರೆಯದ ಜಾಗೀರದಾರ ಬಾಬಾಸಾಹೇಬ ಗರಡಿಯಾಳು. ತನ್ನ ಪ್ರಾಯದ ಕೇಶಪ್ಪನಿಗೆ ಚೆನ್ನಾಗಿ ತಿನ್ನಿಸಿ, ತಾನೂ ತಿಂದು ದಿನವೂ ಅವನೊಡನೆ ಗರಡಿಸಾಧನೆ ಮಾಡುವರು. ಇಬ್ಬರೂ ಒಳ್ಳೇ ಜೋಡಿಯಾಗಿ ಮೆರೆಯುವರು. ಬರಬರುತ್ತ ಕೇಶಪ್ಪ ಜಾಗೀರದಾರರಲ್ಲಿಯೇ ಇರತೊಡಗಿದ. ಅವರ ಮನೆಯ ಒಳ-ಹೊರಗಿನ ಕಾರಭಾರವೂ ಇವನಿಂದಲೇ ನಡೆಯಲಾರಂಭಿಸಿತು. ಕೇಶಪ್ಪನ ಹೆಂಡತಿ ಕಮಲವ್ವ ತನ್ನ ಚಿಂದಿ ಬಟ್ಟೆಯನ್ನು ಕಟ್ಟಿಟ್ಟು ರೇಶ್ಮೆ ಅಂಚಿನ ಸೀರೆ ಉಟ್ಟಳು. ಗಂಡನ ಗೌರವದ ಗುರುತೆಂದು ಹಣೆತುಂಬ ಕುಂಕುಮ ಇಟ್ಟುಕೊಂಡ ಆ ಮುತ್ತೈದೆ ಗೌರಿಯಂತೇ ಕಂಡಳು.

ದೇಸೂರಿಂದ ಬರುವಾಗ ಇಬ್ಬರೇ ಮಕ್ಕಳು. ಕೊಪ್ಪಕ್ಕೆ ಬಂದ ಮರುವರುಷ ಕಮಲವ್ವ ಒಂದು ಗಂಡು, ಒಂದು ಹೆಣ್ಣು ಹೀಗೆ ಅವಳಿ ಮಕ್ಕಳನ್ನು ಹೆತ್ತಳು. ದೇಸೂರಿನಲ್ಲಿ ಎರಡೂ ಹೆರಿಗೆಯ ಕಾಲಕ್ಕೆ ಹೊಟ್ಟೆತುಂಬ ನುಚ್ಚಿಗೂ

ಗತಿ ಇದ್ದಿಲ್ಲ. ಇಲ್ಲೀಗ ಹಾಲು-ತುಪ್ಪದಲ್ಲಿ ಕೈತೊಳೆದಳು. ಜಾಗೀರದಾರತಿ ಮಾಯಿಸಾಹೇಬ ಸ್ವಂತ ನಿಂತು ಇವಳ ಬಾಣಂತಿತನ ಮಾಡಿಸಿದಳು.

* * * *

ಪ್ಲೇಗು ಬಂದು ಏಕಾಏಕಿ ಬಾಬಾಸಾಹೇಬ ಹೊರಟುಹೋದರು. ಜೀವಬಿಡುವಾಗ ಕೇಶಪ್ಪನನ್ನು ನೆನಸಿದರು. ಅವನು ಜಾಗೀರಿ ಕೆಲಸದ ಮೇಲೆಯೇ ತಾಲೂಕಿಗೆ ಹೋಗಿದ್ದ. ಮಕ್ಕಳಿಲ್ಲದ ಮಾಯಿಸಾಹೇಬ ಗತಿ ಯೇನೆಂದು ಗೋಳಿಟ್ಟಳು. ಕೇಶಪ್ಪ ತಾನೂ ಮತ್ತೆ ಗತಿಗೇಡಿಯಾದೆನೆಂದು ಕೊರಗಿದ.

ಕೇಶಪ್ಪನೇ ಮಾಯಿಗೆ ಧೈರ್ಯ ಹೇಳಬೇಕಾಯಿತು.

"ಬಾಬಾಸಾಹೇಬರ ತುತ್ತು ಅನ್ನ ನನ್ನ ಹೊಟ್ಟೆ ಸೇರಿದೆ. ನಿಮ್ಮ ಐದು ಬೆರಳು ನನಗೆ ಅಮೃತ ನೀಡಿವೆ. ನನ್ನ ಸೇವೆಯನ್ನು ಸ್ವೀಕರಿಸಬೇಕು"

—ಎಂದು ಕೇಳಿಕೊಂಡ.

ಮಾಯಿಯ ತವರುಮನೆಯಿಂದ ಮಲ ಅಣ್ಣ ಬಂದಿದ್ದ. ಮಾಯಿ ಯನ್ನು ತನ್ನಲ್ಲಿಗೇ ಕರೆದ. ಮಾಯಿ ಹೋಗಲಿಲ್ಲ.

ಬಾಬಾಸಾಹೇಬರ ಸೋದರಮಾವ ಬಂದು, ತಾನೇ ನಿಂತು ಎಲ್ಲ ವ್ಯವಸ್ಥೆ ನೋಡುತ್ತೇನೆಂದ. ಮಾಯಿ ಮಾತಾಡಲಿಲ್ಲ. ಬಂದ ಇತರ ಆಪ್ತ ವರ್ಗ ಯಾವ ನಂಬಿಗೆಯನ್ನೂ ಕಾಣದೆ ಕಾಲಹಾಕಿದರು. ಕೇಶಪ್ಪ ಹೊಲ-ಮನೆ ನೋಡುತ್ತಲೇ ಇದ್ದ. ಅದೇ ಆಳು-ಕಾಳು; ಅದೇ ಕರಣಿಕವರ್ಗ. ಕೆಲಸ ಎಂದಿನಂತೆ ನಡೆದಿತ್ತು.

ಮಾಯಿಯ ಅಣ್ಣ ಕ್ರುದ್ಧನಾಗಿ ಹೊರಟುಹೋದ. ಬಾಬಾಸಾಹೇಬರ ಸೋದರಮಾವ ಕೃಷ್ಣಶಾಸ್ತ್ರಿಗೆ ಇನ್ನೂ ಆಸೆಯಿತ್ತು. ಬಾಬಾ ಸಣ್ಣವನಿದ್ದಾಗ ಆವನು ಇಲ್ಲೇ ನಿಂತು ಹೊಲ-ಮನೆ ನೋಡಿಕೊಂಡಿದ್ದ. ತಾಯಿ-ತಂದೆ ಇಲ್ಲದ ಬಾಬಾಸಾಹೇಬನಿಗೆ ಆವನೇ ನೆರೆಯಾಗಿದ್ದ. ಅಲ್ಪವಯಿ ಸಂರಕ್ಷಣದಾರ ನೆಂದು ಸರಕಾರ ಇವನನ್ನೆ ಗೊತ್ತುಮಾಡಿ ಜಾಗೀರಿಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿತ್ತು. ಬಾಬಾಸಾಹೇಬ ವಯಸ್ಸಿಗೆ ಬಂದಾಗ ಕೃಷ್ಣಶಾಸ್ತ್ರಿ ಈ ಮಾಯಿಯನ್ನು ವಧುವಾಗಿ ಆರಿಸಿ ಮದುವೆ ಮಾಡಿದ್ದ. ಜಾಗೀರಿ ಬಾಬಾ ಸಾಹೇಬನ ವಶಕ್ಕೆ ಬಂದಾಗ ಆವರ ತಾಯಿಯ ಮೈಮೇಲಿದ್ದ ಬಂಗಾರ,

ವಸ್ತ್ರ–ಒಡವೆ, ಮನೆಯ ಪಾತ್ರೆ–ಪರಡಿಗಳನ್ನೆಲ್ಲ ಕೃಷ್ಣಶಾಸ್ತ್ರಿ ತನ್ನ ಮನೆಗೆ ಸಾಗಿಸಿದ್ದ. ಶಾಸ್ತ್ರಿಯೇ ಅವಳ ಅಣ್ಣ.

ಬಾಬಾಸಾಹೇಬನ ಕೈಗೆ ಬಂದದ್ದು ಕರೇ ಹೊಲ; ಬರೇ ಮನೆ. ಸರಕಾರದಲ್ಲಿದ್ದ ಹತ್ತು ಸಾವಿರ ರೂಪಾಯಿ ಇನ್ನೂ ಕನ್ನಡಿಯ ಗಂಟಾಗಿತ್ತು. ಶಾಸ್ತ್ರಿ ಐದು ಸಾವಿರ ಮದುವೆಯ ಸಾಲ ಹೇರಿದ್ದ. ಮಾಯಿ ತನ್ನ ಮನೆಯಿಂದ ತಂದ ಪಂಛೇರು ಬಂಗಾರ ಮಾತ್ರ ಅವಳ ಮೈಮೇಲಿತ್ತು.

ಜಾಗೀರಿ ವಾಡೆ ಸುತ್ತಲೂ ಬಿದ್ದಿತ್ತು. ಕೊಟ್ಟಿಗೆಯಲ್ಲಿ ಬರೇ ಮುದುಕ ದನಗಳು. ಕಮತಿಗರು ಇಲಿಯಾಗಿ ಹೆಗ್ಗಣವಾಗಿ ಮನೆ ಕೆದರಿದ್ದರು.

ಕೃಷ್ಣಶಾಸ್ತ್ರಿ ನೋಡಿಕೊಂಡದ್ದು ಹೀಗೆ. ಜಾಗೀರಿಯ ಗೌರವ ಮಾತ್ರ ಅವನಿಂದ ಅಳಿಸುವದಾಗದೆ ಉಳಿದಿತ್ತು.

ಆಗಲೇ ಕೇಶಪ್ಪ ದೇಸೂರಿನಿಂದ ಬಂದದ್ದು; ಕಮತಿಗರ ಮೇಲ್ವಿಚಾರಕನಾಗಿ ನಿಂತದ್ದು. ಬೆಳೆ ಬರುತ್ತಲೇ ಇತ್ತು. ಮನೆ ದುರಸ್ತಾಯಿತು. ಮುಂಚಿನ ಪಾತ್ರೆ–ಪಡಗ ಎಲ್ಲಾ ಶಾಸ್ತ್ರಿಯ ಮನೆಯಿಂದ ಹೇರಿಕೊಂಡು ತಂದಾಯಿತು. ಹದಿನಾರೆತ್ತಿನ ಕಮತ ನಡೆಯಿತು. ಹೆಗ್ಗಣ–ಮುಂಗಲಿಗಳೆಲ್ಲ ಓಡಿದವು. ಶಾಸ್ತ್ರಿ ಬಂದು ಹೋಗುವದನ್ನೂ ನಿಲ್ಲಿಸಿದ್ದ. ಬಾಬಾಸಾಹೇಬರಿಗೆ ಈ ಕೇಶಪ್ಪ ಅಣ್ಣನಂತೆ, ಹಿರಿಯನಂತೆ ಬೆಂಬಲವಾಗಿದ್ದ. ಕೇಶಪ್ಪ ಕೇಶಣ್ಣನಾಗಿಯೇ ಗೌರವ ಪಡೆದ. ಆದರೆ ಬಾಬಾಸಾಹೇಬರೊಡನೆ ಅವನು ಯಜಮಾನನ ಗೌರವದಿಂದಲೇ ನಡೆದ. ಆಳೆಂದೇ ತಿಳಿದ. ಅವರು ಕೈಎತ್ತಿ ಕೊಟ್ಟದನ್ನು ಪ್ರಸಾದವೆಂದು ಮುಡಿದ. ಹೊರಗೆ ಬಾಬಾಸಾಹೇಬರ ನೆರಳಾಗಿ ಸುಳಿದ. ಮನೆಯಲ್ಲಿ ತುದಿಗಟ್ಟೆಯೇ ತನ್ನ ಸ್ಥಳವೆಂದು ತಿಳಿದ.

ಮಾಯಿಯ ಅಣ್ಣ ಕ್ರುದ್ಧನಾದದ್ದು ತಂಗಿಯ ಮೇಲಾದರೆ ಶಾಸ್ತ್ರಿ ಜಾಲ ಒಡ್ಡಿದ್ದು ಕೇಶಪ್ಪನ ಬೇಟೆಗಾಗಿ.

ಶಾಸ್ತ್ರಿ ತಾನೇ ಮೇಲ್ವಿಚಾರಕನೆಂಬಂತೆ, ಒಡೆಯನೆಂಬಂತೆ ದಿನ–ದಿನವೂ ಕೇಶಪ್ಪನನ್ನು ಕೆಲಸ–ಕಾರ್ಯಗಳ ಬಗ್ಗೆ ಕೇಳುತ್ತಿದ್ದ; ಕೇಶಪ್ಪ ಮಾಡಿದ್ದನ್ನು–ಮಾಡಬೇಕೆಂದದ್ದನ್ನು ಹೇಳುತ್ತಲಿದ್ದ.

ಆಗ ಕೇಶಪ್ಪ ಹೊರಗೆ ಬೇರೆಯೇ ಮನೆ ಮಾಡಿಕೊಂಡಿದ್ದ.

ಒಂದು ದಿನ ಸಾಯಂಕಾಲ ಕೇಶಪ್ಪ ಪಡಸಾಲೆಯ ತನ್ನ ಮಾಮೂಲಿಯ ಸ್ಥಳದಲ್ಲಿ ಕುಳಿತು ಎಲೆ-ಅಡಿಕೆ ಮೆಲ್ಲುತ್ತಿದ್ದ. ಅಂದು ಸೋಮವಾರ. ದನಗಳು ಮನೆಯಲ್ಲಿಯೇ ಇದ್ದವು. ಕಮತಿಗರು ಅಂಗಳದಲ್ಲಿ ಕುಳಿತಿದ್ದರು. ಶಾಸ್ತ್ರಿ ಒಳಗಿನಿಂದ ಬಂದು ಯಜಮಾನರ ಸ್ಥಳದಲ್ಲಿ ಕುಳಿತ.

ಯಜಮಾನರು ತೀರಿಕೊಂಡು ಎರಡು ತಿಂಗಳಾಗಿತ್ತು. ಆ ಸ್ಥಳ ಎಂದರೆ ಒಂದು ಗಾದಿ; ಒಂದು ದಿಂಬು (ಲೋಡು; ತೆಕ್ಕೆ). ದಿನವೂ ಅದನ್ನು ಕೊಡವಿ ಹಾಸಿ ಇಡಲಾಗುತ್ತಿತ್ತು. ಆದರೆ ಅದರ ಮೇಲೆ ಬೇರೆ ಯಾರೂ ಕುಳಿತಿದ್ದಿಲ್ಲ.

ಶಾಸ್ತ್ರಿ ಬಂದು ನಿಂತು ಇಷ್ಟು ದಿನವಾದರೂ ಆ ಗಾದಿಯ ಬಳಿ ಸುಳಿದಾಡಿದ್ದನಾಗಲಿ, ಅದರ ಮೇಲೆ ಕುಳಿತಿದ್ದಿಲ್ಲ. ಇಂದು ಅವನು ಬಂದು ಅದರ ಮೇಲೆ ಕೂಡುತ್ತಲೇ ಕೇಶಪ್ಪ ಕಣ್ಣು ಕೆಕ್ಕರಿಸಿ ನೋಡಿ,

"ಶಾಸ್ತ್ರಿಯವರು ಅಲ್ಲಿ ಕೂಡಬಹುದೇ ?" ಎಂದ.

"ಏನು ಮಾತು, ನಾನಿಲ್ಲಿ ಕೂಡಲಾಗದೆ ?" ಶಾಸ್ತ್ರಿ ಉತ್ತರಿಸಿದ.

"ಅದು ಯಜಮಾನರ ಸ್ಥಳ. ಅಲ್ಲಿ ಯಾರು ಕೂಡಬೇಕೆಂದು ಮಾಯಿಯವರೇ ಗೊತ್ತುಮಾಡಬೇಕು."

"ಅವರೇನು ಮಾಡುತ್ತಾರೆ? ದುಃಖದಿಂದ ಇನ್ನೂ ಮೇಲೇಳಲಿಲ್ಲ ಅವರು."

"ಈಗ ಬೇಡವೇ ಬೇಡ. ಅವರು ಎಂದಾದರೆ ಅಂದು ಒಬ್ಬರನ್ನು ಅದರ ಮೇಲೆ ಕೂಡಿಸಲಿ."

"ನಾನು ಹಿಂದೆ ಇದರ ಮೇಲೆ ಕೂತಿದ್ದೆ ಇಂದಾದರೂ ಕೂಡಬಲ್ಲೆ."

"ಆಗ ಯಜಮಾನರಿದ್ದರು; ಅವರ ಪರವಾಗಿ ಕೂತಿರಬಹುದು."

"ಇಂದೂ ನಾನೇ ಕೂಡುವವ."

"ಹಾಗೆ ಮಾಯಿ ಹೇಳುವ ವರೆಗೆ ನೀವು ಇಲ್ಲಿ ಕೂಡಲಾಗದು ಶಾಸ್ತ್ರಿಗಳೆ."

"ನೀನು ಕೂಡಬೇಕೆನ್ನುತ್ತೀಯೇನು ?"

"ನನ್ನ ಸ್ಥಳವೆಲ್ಲಿಯೆಂದು ನೀವು ನನಗೆ ಹೇಳಬೇಕಾಗಿಲ್ಲ."

"ನೀನು ಅದಕ್ಕೂ ಇಂದಿನಿಂದ ಎರವಾದಿ."

" ಶಾಸ್ತ್ರಿಗಳೆ, ಈ ಗೊಂದಲ ಈಗ ಬೇಡ. ಯಜಮಾನರು ತೀರಿ ಇನ್ನೂ ಎರಡು ತಿಂಗಳಾಗಿಲ್ಲ. ಈಗಲೆ ಮಾಯಿ ಸಾಹೇಬರನ್ನು ಗೋಳಾಡಿಸಬೇಡಿರಿ."

" ಸಾಕು ನಿನ್ನ ಹರಟೆ! ತೊಲಗಿಲ್ಲಿಂದ!"

" ಶಾಸ್ತ್ರಿಗಳೆ!"

" ಹೊರಡು ಎನ್ನುತ್ತೇನೆ—"

" ಆಯಿತು; ಮಾಯಿಯವರಿಂದ ಒಮ್ಮೆ ಹೇಳಿಸಿಬಿಡಿರಿ."

" ನಾನು ಹೇಳುತ್ತೇನೆ."

" ಆದಾಗುವದಿಲ್ಲ ಶಾಸ್ತ್ರಿಗಳೆ; ನೀವು ಅಲ್ಲಿಂದ ಈಗ ಏಳಬೇಕು" ಎನ್ನುತ್ತ ಕೇಶಪ್ಪ ತನ್ನ ಸ್ಥಳಬಿಟ್ಟು ಎದ್ದ. ಕಣ್ಣಲ್ಲಿ ಕಿಡಿ ಹಾರುತ್ತಿತ್ತು. ಎದ್ದವನು ಒಂದೊಂದೇ ಹೆಜ್ಜೆ ಇಡುತ್ತ ಶಾಸ್ತ್ರಿಗಳ ಎದುರು ಬಂದು ನಿಂತ.

" ಹೂ—ಏಳಿರಿ."

" ಏನು ಹೊಡೆಯುತ್ತೀಯಾ?"

" ಇಲ್ಲ; ಹೊರಡಿಸುತ್ತೇನೆ."

ಅಂಗಳದಲ್ಲಿ ಕುಳಿತಿದ್ದ ಕಮತಿಗರು ಎದ್ದು ನಿಂತಿದ್ದರು.

ಬಾಗಿಲಲ್ಲಿ ಮಾಯಿ ಕಾಣಿಸಿಕೊಂಡರು. ಇನ್ನೂ ಮಧ್ಯ ವಯಸ್ಸೂ ಇಲ್ಲ. ಚಿಂತೆಯಿಲ್ಲದೆ ಬೆಳೆದ ಸುಖದ ಮೈ. ಆದರೆ ಹಸಿರು ಹಣ್ಣೆ. ಬಾಡಿ ಬತ್ತಿದ ಮುಖ. ಒಂದು ಬಿಳಿಯ ದುಪ್ಪಟಿ ಹೊದ್ದುಕೊಂಡು ಬಾಗಿಲಲ್ಲಿ ನಿಂತದ್ದನ್ನು ಮೊದಲು ಕಮತಿಗರು ನೋಡಿದರು. ನೆಲಮುಟ್ಟಿ ಕೈಮುಗಿದರು.

ಕೇಶಪ್ಪ ನೋಡಿದ. ಅಡ್ಡಬಿದ್ದು ಹಿಂದೆ ಸರಿದ.

ಮಾಯಿ ನಿಧಾನವಾಗಿ ಹೇಳಿದರು:

" ಕೇಶಪ್ಪ, ಶಾಸ್ತ್ರಿಯವರಿಗೆ ಹೇಳು: ಯಜಮಾನರನ್ನು ಅವರೇ ಸಂರಕ್ಷಣ ಮಾಡಿದರು; ನನ್ನನ್ನು ತಂದು ಮದುವೆಯನ್ನೂ ಮಾಡಿದರು. ನನ್ನ ದುರದೃಷ್ಟ—ಇವರನ್ನು ಕಳೆದುಕೊಂಡೆ. ಇನ್ನೂ ನನ್ನೆದೆಯ ಕಿಚ್ಚು ಆರಿಲ್ಲ; ಅದು ಆರುವಂತೆಯೂ ಇಲ್ಲ. ಯಜಮಾನರ ವರ್ಷಾಂತಿಕವಾಗಲಿ ಈ ಜಾಗೀರಿ ಎಲ್ಲರಿಗೂ ಬೇಕು. ನಾನು ಯಾರಿಗೆ ಬೇಕಾಗಿದ್ದೇನೆ-ಎಂಬುದನು ಬಲ್ಲೆ ನಾನು. ನನಗೆ ತವರಿಗೆ ಹೋಗುವದೂ ಇಷ್ಟವಿಲ್ಲ. ಇಲ್ಲಿ ನಾನಿದ್ದೂ

ಪ್ರಯೋಜನವಿಲ್ಲ. ನಾನು ಕಾಶಿಗೆ ಹೋಗಿ ಅಲ್ಲೀ ಇರುತ್ತೇನೆ. ನನ್ನ ಜೀವಮಾನಕ್ಕೆ ಸಾಲುವಷ್ಟು, ನನ್ನ ಧರ್ಮಕಾರ್ಯ ನಡೆಯುವಷ್ಟು ದೊರೆತರೆ ಸಾಕು ನನಗೆ. ಮುಂದೆ ಯಾರ ಋಣವಿದೆಯೋ ಅವರು ತಿನ್ನಲಿ. ವರ್ಷಾಂತಿಕವಾಗುವವರೆಗೆ ಯಜಮಾನರ ಸ್ಥಳ ತೆರವಾಗಿಯೇ ಇರಲಿ. ಅವರ ಜೀವ ಇಲ್ಲೇ ಇದ್ದು ಅದನ್ನು ನೋಡಿಕೊಳ್ಳಲಿ. ಮುಂದೆ ಈ ಸ್ಥಳವನ್ನಲ್ಲದೆ ಹೋದರೂ ಆ ಗಾದಿ, ದಿಂಬು ನನ್ನ ಜತೆಯಲ್ಲಿ ಒಯ್ಯುತ್ತೇನೆ. ಆ ವರೆಗೆ ಈಗ ನಡೆದಂತೆಯೇ ನಡೆಯಲಿ-ಎಂದು ನನ್ನ ಆಸೆ. ನೀವೆಲ್ಲ ಕೂಡಿ ನಡಸಿಕೊಟ್ಟರೆ ಅದೇ ನನ್ನ ಪುಣ್ಯ........"

ಅಂಗಳದಲ್ಲಿದ್ದ ಕಮತಿಗರು, ತುದಿಗಟ್ಟೆಯ ಮೇಲಿದ್ದ ಕೇಶಪ್ಪ ನಿಂತು ಕೇಳುತ್ತ ಕಂಬನಿಗರೆದರು. ಕೃಷ್ಣಶಾಸ್ತ್ರಿ 'ಇದು ತನಗೆ ಮೀರಿದ ಕಾರಸ್ಥಾನವೇ?' ಎಂದುಕೊಂಡು ಧಿಗ್ಗನೆ ಅಲ್ಲಿಂದೆದ್ದು ಕಾಲಪ್ಪಳಿಸುತ್ತ ಒದರಿದ :

"ನನ್ನ ತಂಗಿಯ ಮನೆ ಉಳಿಸಬೇಕೆಂದೆ; ನನ್ನ ಸಥಿಯೇ ಇಲ್ಲ. ಹಾಳಾಗಿ ಹೋಗಲಿ" ಎನ್ನುತ್ತ ಹೊರಬಿದ್ದು ಹೋದ.

ಮುಂದೆಯೂ ಎಲ್ಲ ಕೆಲಸಕಾರ್ಯ ಮುಂಚಿನಂತೆ ನಡೆದವಾದರೂ ಕೃಷ್ಣಶಾಸ್ತ್ರಿಯ ಕಾಲದ ರೈತರು, ಕಮತಿಗರು, ಪ್ರತಿಯೊಂದಕ್ಕೆ ಅಡ್ಡಗಾಲು ಹಾಕಿದರು. ಹೊಲದಲ್ಲಿಯ ರಾಶಿ ಮನೆಗೆ ಸೇರಲಿಲ್ಲ. ಬಣವೆಗಳು ಸುಟ್ಟವು. ಒಂದು ರಾತ್ರಿ ಜಾಗೀರಿ ವಾಡೆ ದರೋಡೆಯಾಯಿತು. ಮಾಯಿ ತವರಿನಿಂದ ತಂದ ಬಂಗಾರವೂ ಕಳ್ಳರ ವಶವಾಯಿತು. ಕೇಶಪ್ಪ ದಿಡ್ಡಿ ಬಾಗಿಲದಿಂದ ಮಾಯಿಯನ್ನು ಪಾರು ಮಾಡದಿದ್ದರೆ ಅವರ ಗತಿ ಏನಾಗುತ್ತಿತ್ತೋ—ಏನೋ!

ಮಾಯಿ ಕೇಶಪ್ಪನಲ್ಲಿಯೇ ನಿಂತು, ಸರಕಾರಕ್ಕೆ ಬರೆದುಕೊಂಡು "ಮುಂಚಿನಂತೆ ಎಲ್ಲಾ ಆಸ್ತಿ ಸರಕಾರದ ವಹಿವಾಟಿನಲ್ಲಿ ನಡೆಯಲಿ. ನನ್ನ ಖರ್ಚಿಗೆ ಸರಕಾರದಿಂದಲೇ ನನ್ನ ಜೀವಮಾನದ ವರೆಗೆ ದೊರೆತರೆ ಸಾಕು" ಎಂದುಬೇಡಿಕೊಂಡಳು.

ಸರಕಾರ ಆ ವ್ಯವಸ್ಥೆಯನ್ನು ಕೂಡಲೆ ಒಪ್ಪಿಕೊಂಡು ಮಾಯಿ ಸಾಹೇಬರಿಗೆ ತಿಂಗಳೊಂದಕ್ಕೆ ಒಂದು ಸಾವಿರ ರೂಪಾಯಿ ಇದ್ದಲ್ಲಿಂದ ಪಡೆಯುವ ಮಾರ್ಗ ಮಾಡಿಕೊಟ್ಟಿತು.

ಸರಕಾರದ ರಕ್ಷೆಯಲ್ಲಿಯೇ ಮಾಯಿ ಯಜಮಾನರ ಗಾದಿ-ದಿಂಬು ಪಡೆದುಕೊಂಡು ಕಾಶಿಯಲ್ಲಿ ನೆಲಸಲು ತೆರಳಿದಳು.

ಕೇಶಪ್ಪ ಕಳಿಸಹೋಗಿದ್ದ. ಜತೆಯಲ್ಲಿ ಮಾಯಿಯವರ ಸೇವೆಗೆ ತನ್ನ ಮಗಳನ್ನಿರಿಸಿದ. ಹಿರಿಯ ಕಮತಿಗ ಧರ್ಮಣ್ಣ ಯಜಮಾನಿತಿಯ ರಕ್ಷೆಗೆಂದು ತೆರಳಿದ. ಕೇಶಪ್ಪ ತಿರುಗಿ ಬರಲು ಮಾಯಿಯ ನಿರೋಪ ಬೇಡಿದಾಗ ಅವನಿಗೆ ದುಃಖ ತಡೆಯಲಿಲ್ಲ. “ ಅಪ್ಪಣೆಯಾದರೆ ನಿಮ್ಮ ಸೇವೆ ನಾನೇ ಮಾಡಿಕೊಂಡಿರುತ್ತೇನೆ— ” ಎಂದು ಅಂದ. ಅದಕ್ಕೆ ಮಾಯಿ,

“ ಬೇಡ, ಕೇಶಪ್ಪ. ಮತ್ತೆ ನನಗೆ ಹಿಂದಿನ ಜಾಗೀರಿ ನೆನಪು, ಮೋಹ ನೀನಿದ್ದರೆ ಕಾಡುತ್ತವೆ. ನೀನು ಮಕ್ಕಳೊಂದಿಗ. ಎಲ್ಲಾದರೂ ದುಡಿದು ಕೊಂಡಿರು. ನಿನಗೆ ನಾನು ಆಶ್ರಯ ಕೊಡಲಾರೆ; ನಿನ್ನ ಆಶ್ರಯ ಪಡೆಯಲಾರೆ. ಯಜಮಾನರಿಗೆ ನಾನು ಧರ್ಮಪತ್ನಿಯಾಗಿ ಬಂದೆ. ನೀನು ಅಣ್ಣನಾಗಿ ಅವರನ್ನು ನೋಡಿಕೊಂಡಿ. ನಮ್ಮಿಬ್ಬರದೂ ದುರ್ದೈವ. ಅವರನ್ನು ಉಳಿಸಿಕೊಳ್ಳಲಾರದೆ ಹೋದೆವು. ಅವರಿಗೆ ನನ್ನ ಮೇಲಿರುವಷ್ಟೆ ನಿನ್ನಲ್ಲಿ ಪ್ರೀತಿಯಿತ್ತು, ವಿಶ್ವಾಸವಿತ್ತು. ಅದಕ್ಕಿಂತ ಹೆಚ್ಚಿನ ಅಭಿಮಾನವಿತ್ತು; ಆದರವಿತ್ತು. ಆದ್ದರಿಂದ ಅವರ ಆಸ್ತಿ-ಪಾಸ್ತಿ ಕಾಯ್ದೆಯಿಂದ ನನ್ನವಾಗಿದ್ದರೂ ಕರ್ತವ್ಯದಿಂದ ನೀನೂ ಭಾಗೀದಾರನಾಗಿರುವಿ. ನಮ್ಮ ಬಳಗದವರ ಈರ್ಷೆಯಿಂದ ಅದು ನನಗೂ ನಿನಗೂ ದಕ್ಕುವಂತಿರಲಿಲ್ಲ. ಆದರೆ ನಮ್ಮಲ್ಲಿಯ ವಿಶ್ವಾಸವನ್ನು ಯಾರು ಅಪಹರಿಸಿಯಾರು ? ನೋಡು, ಈಗ ಯಜಮಾನರ ಗುರುತಾಗಿ ನನ್ನಲ್ಲಿ ಉಳಿದಿರುವುದು ಈ ಗಾದಿ, ಈ ದಿಂಬು-ಮಾತ್ರ; ಅದರಲ್ಲಿ ಒಂದು ನನಗಿರಲಿ; ಒಂದನ್ನು ನೀನೊಯ್ಯಬೇಕು. ಗಾದಿಯನ್ನು ಸ್ವತಃ ಅವರೇ ಎಂದು ತಿಳಿದು ನಾನು ಇಟ್ಟುಕೊಳ್ಳುತ್ತೇನೆ. ದಿಂಬು ಅವರ ಆಶ್ರಯವೆಂದು ನಿನ್ನ ತಲೆಗಿರಲಿ ” ಎಂದಳು.

ಕೇಶಪ್ಪ ಈ ವಿಶ್ವಾಸವನ್ನು ನಿರಾಕರಿಸಲಿಲ್ಲ. ಮಾಯಿಯ ಮಾತು ಶಿರಸಾವಹಿಸಿ ಭರತ ಪಾದುಕೆ ಒಯ್ದಂತೆ ದಿಂಬನ್ನು ಕೊಂಡುಬಂದ.

ಆ ದಿಂಬನ್ನು ಪ್ರಕಟವಾಗಿ ಇರಿಸಿ ಪೂಜಿಸಲಾರ, ಕೇಶಪ್ಪ. ಮತ್ತೆ ಜನರ ಕಣ್ಣು ತಾಗಿ, ಕೃಷ್ಣಶಾಸ್ತ್ರಿಯ ಕಾರಸ್ಥಾನಕ್ಕೆ ತುತ್ತಾಗಬೇಕಾದೀ

ತೆಂದು ಮಾಯಿಯವರ ಹೇಳಿಕೆಯಂತೆ ಅದನ್ನು ದಿಂಬಾಗಿಯೇ ಉಪಯೋಗಿಸಿದ.

* * * *

ಕೇಶಪ್ಪನಿಗೆ ಜಾಗೀರಿ ಊರಲ್ಲಿ ಈಗ ಕೆಲಸ ಉಳಿದಿಲ್ಲ. ಅವನು ಇಲ್ಲಿ ಇರುವನಾದರೆ ಮರ್ಯಾದೆಯೂ ಉಳಿಯುವಂತಿಲ್ಲ. ತನ್ನ ದೇಸೂರಿಗೆ—ಮರಳಿ ಮಣ್ಣಿಗೇ—ಹೊರಟು ಬಂದ. ಜಾಗೀರಿಯಿಂದ ವಿಶ್ವಾಸದಲ್ಲಿ ಗಳಿಸಿದ ಅಲ್ಪ ಅನುಕೂಲದಿಂದ ಕಮತ-ಕಟ್ಟೆ ಮಾಡಿಕೊಂಡು ನಿಂತ.

* * * *

ಯಜಮಾನರ ವರ್ಷಾಂತಿಕಕ್ಕೆ ತಪ್ಪದೇ ಕೇಶಪ್ಪ ಕಾಶಿಗೆ ಹೋಗಿ ಬರುತ್ತಿದ್ದ. ಬೆಳೆದ ಅವನ ಮಗಳಿಗೆ ಮಾಯಿ ಅಲ್ಲಿಯೇ ಮದುವೆ ಮಾಡಿಸಿದ್ದರು. ಧರ್ಮಪ್ಪ ವಿಶ್ವನಾಥನ ಪಾದ ಸೇರಿದ್ದ.

ಮಾಯಿಯವರಲ್ಲಿ ಈಗ ಶಾಲೆಯ ಹತ್ತು ಬಾಲಕರು ವಿದ್ಯಾರ್ಜನೆಗೆಂದು ಇದ್ದಾರೆ ದಕ್ಷಿಣದ ಯಾತ್ರಿಕರಿಗೆ ಮಾಯಿಯ ಮನೆ ಸದಾಶ್ರಯವಾಗಿದೆ.

* * *

ಕೇಶಪ್ಪನ ಮಗ ಪ್ರಬುದ್ಧನಾಗಿ ತಂದೆಯ ಶ್ರಮ ಉಳಿಸಿದ್ದಾನೆ. ಆದರೆ ಅವನು ಪೋಲಿ. ಅವನ ಗಳಿಕೆಯ ಮಾರ್ಗ ಸನ್ಮಾರ್ಗವಲ್ಲ.

ಕೇಶಪ್ಪನ ಮಡದಿಗೆ ಅಕಾಲ ವೃದ್ಧಾಪ್ಯ ಬಂದಿದೆ. ಹಿರಿಯ ಮಗನ ನಡತೆಯಿಂದಲೇ ಅವಳು ಮುದುಕಿಯಾಗಿದ್ದಾಳೆ. ಒಮ್ಮೆ ಅದೇ ಮಗನ ಕಾಲೊದೆತದ ಪ್ರಸಾದ ಆ ತಾಯಿಗೆ ದೊರೆಯಿತು. ಅವಳು ಕೇಶಪ್ಪನ ಪಾದ ಹಿಡಿದು ಅತ್ತು ಕರೆದಳು. ಮುಂದೆ ಹೃದ್ರೋಗ ಹಚ್ಚಿಕೊಂಡು ಬಹು ಬೇಗ ಕಣ್ಣು ಮುಚ್ಚಿದಳು.

* * * *

ಕೇಶಪ್ಪನಿಗೆ ಈಗ ಆತ್ಮೀಯತೆಯುಳಿದದ್ದು ಯಜಮಾನರ ದಿಂಬಿನಲ್ಲಿ ಮಾತ್ರ. ಹೆಂಡತಿ ತೀರಿದ ವರುಷ ಕಾಶಿಗೆ ತನ್ನ ಅವಳಿ ಮಕ್ಕಳೊಡನೆ ಹೋದ.

ಮಾಯಿ ಇರಹೇಳಿದರೆ ಅಲ್ಲೇ ಇರಬೇಕೆಂದ. ಆದರೆ ಅವಳು ಆವನ ಅವಳ ಮಕ್ಕಳನ್ನು ತಮ್ಮಲ್ಲಿ ಇರಿಸಿಕೊಂಡು "ನಿನ್ನ ಮಗನನ್ನು ನೋಡಿಕೋ"—ಎಂದು ಹೇಳಿ ತಿರುಗಿ ಕಳಿಸಿದಳು.

ಮಗನನ್ನು ಇವನು ನೋಡಿಕೊಳ್ಳುವಂತಿಲ್ಲ; ಮಗ ಇವನನ್ನು ನೋಡಿ ಕೊಳ್ಳುವಂತಿಲ್ಲ. ಸೊಸೆ ಗಂಡನ ಸ್ವೈರಾಚಾರಕ್ಕೆ ಬಲಿಯಾಗಿ ಮನೆಮೂಳ ಆಗಿದ್ದಾಳೆ. ಅವಳಿಗೆ ಕೇಶಪ್ಪ ನೆರೆ; ಕೇಶಪ್ಪನಿಗೆ ಅವಳ ಆರೈಕೆಯೇ ಭಾಗ್ಯ.

*

ಕೇಶಪ್ಪನಿಗೆ ಮುಪ್ಪು ಬಂದಿದೆ. ಆ ಸಲದ ಯಜಮಾನರ ವರ್ಷಾಂತಿಕಕ್ಕೆ ಕಾಶಿಗೆ ಹೋಗಬೇಕೆಂದರೆ ಅವನೀಗ ಪರಾಧೀನ. ಬಿದ್ದುಕೊಂಡಲ್ಲಿಯೇ ಕೇಶಪ್ಪ ಚಿಂತಿಸುತ್ತಾನೆ: ನನಗೆ ಕಾಶಿಯಲ್ಲಿ ಸಾವು ಬರಬಾರದೇ—ಎಂದು.

ಅಂದು ಕೇಶಪ್ಪ ಯಜಮಾನರನ್ನು ನೆನೆಸುತ್ತ, ಮಾಯಿಯವರನ್ನು ಹೊಗಳುತ್ತ ಬಿದ್ದಲ್ಲಿಯೇ ಬಿದ್ದಿದ್ದಾನೆ. ಇವನ ಈ ಜಪ ಅವನ ಪ್ರಬುದ್ಧ ಮಗನಿಗೆ ಸಹಿಸಲಿಲ್ಲ. ಜಾಗೀರಿಯ ದಿಂಬಿನ ಮೇಲೊರಗಿದ ತಂದೆಯನ್ನು ಕೆಕ್ಕರಿಸಿ ನೋಡಿ ಮಗ ಕಿರಿಚಿದ:

"ಇನ್ನು ನನ್ನ ಮನೆಯಲ್ಲಿ ನಿನ್ನ ಜಾಗೀರಿಯ ಮಾತು ಬೇಡ."

ಕೇಶಪ್ಪ "ಮಗನೇ! ನನಗೆ ಅದೊಂದಾದರೂ ಸ್ವಾತಂತ್ರ್ಯವಿರಲಿ" ಎಂದು ಬೇಡಿಕೊಂಡ.

ಕ್ರುದ್ಧನಾದ ಮಗ ತೂರಿಕೊಂಡು ಬಂದು ತಂದೆಯನ್ನು ದಿಂಬಿನಿಂದ ಎಳೆದು ಹಾಕಿದ. ದಿಂಬನ್ನೇ ಅಪ್ಪಿಕೊಂಡ ಕೇಶಪ್ಪ "ನನ್ನ ಕೊನೆಗಾಲದಲ್ಲಿ ಈ ದಿಂಬಿನಿಂದ ಅಗಲಿಸಬೇಡ ಮಗನೇ" ಎಂದು ಬೇಡಿಕೊಂಡ.

"ನಿನ್ನ ದಿಂಬು ಹಾಳಾಗಲಿ" ಎಂದು ಅರಚುತ್ತ ಅದನ್ನು ಕಸಿದು ಚೂರಿಯಿಂದ ಚರ-ಚರ ಹರಿದೊಗೆದ ಮಗ, ದಿಂಬಿನ ಹೊಟ್ಟೆಯಿಂದ ಬಳ ಬಳ ಬೀಳುವ ಚಿನ್ನದ ರಾಣಿ ವರಹಗಳನ್ನು ನೋಡಿ ಆಶ್ಚರ್ಯಗೊಂಡ!

* * * *

ಕೇಶಪ್ಪ ಬಿದ್ದುಕೊಂಡಲ್ಲಿಯೇ ಇದನ್ನೆಲ್ಲ ಚಿತ್ರಿಸಿಕೊಳ್ಳುತ್ತಿದ್ದಾನೆ.

# ಲೇಡೀ ಟೈಪಿಸ್ಟ

ಒಂದೊಂದು ಜೀವ ಒಬ್ಬೊಬ್ಬರ ಜೀವನವೇ ಆಗಿರುವದುಂಟು. ಪ್ರಕಾಶ ಸುಪ್ರಸಿದ್ಧ ಲೇಖಕನಾದದ್ದು ಅವನ ಟೈಪಿಸ್ಟ ಸಂಧ್ಯಾನ ಸಹ ವಾಸದಿಂದ—ಎಂದರೆ ಆಶ್ಚರಿಪಡಬೇಕಾಗಿಲ್ಲ. ಅವಳು ಇಂದವನ ಜತೆಗೆ ಇಲ್ಲದಿರುವದೇ ಅವನ ನಿಷ್ಕ್ರಿಯ ಜೀವನಕ್ಕೆ ಕಾರಣವೆಂಬುದು ಬಹು ಜನ ರಿಗೆ ಗೊತ್ತಿರಲಿಕ್ಕಿಲ್ಲ. ಆದರೆ ಪ್ರಕಾಶನ ಪ್ರಸಿದ್ಧಿಯನ್ನೇನವಳು ಕೊಂಡು ಹೋಗಲಿಲ್ಲ; ಅವನ ಉಲ್ಲಾಸ, ಅವನ ಕಾರ್ಯಪಟುತ್ವಗಳು ಮಾತ್ರ ಇಂದು ಮಾಯವಾದದ್ದು ನಿಜ.

ಸಂಧ್ಯಾ–ಪ್ರಕಾಶ ಈ ಹೆಸರುಗಳು ಲೇಖಕವರ್ಗಕ್ಕೆ, ಪತ್ರ ಪ್ರಪಂಚಕ್ಕೆ ಜತೆ–ಜತೆಗೇ ಕಂಡು ಕೇಳಿದವುಗಳು. ಅವಳು ಅವನ ಟೈಪಿಸ್ಟ ಎಂದು ಅವನ ಬಳಿಗೆ ಬಂದಿದ್ದರೂ ಮುಂದೆ ಅವನ ಕಾರ್ಯದರ್ಶಿನಿಯಾಗಿ, ಅವನ ಲೇಖನ ಗಳಿಗೆ ಸ್ಫೂರ್ತಿಯ ಸೆಲೆಯಾಗಿ ಇದ್ದವಳು. ಅವಳ ಪಟುತ್ವವೂ ಅವನ ಜೀವಂತ ಕೃತಿಯಂತಿತ್ತು. ಸಂಧ್ಯಾ ಪ್ರಕಾಶನ ಹತ್ತಾರು ಸುಪ್ರಸಿದ್ಧ ಕೃತಿ ಗಳಲ್ಲಿ ಪ್ರ–ಪ್ರಥಮ ಕೃತಿ.

ಇಂಥ ಲೇಖಕರಿಗೆ ಮುಂಬಯಿಯೇ ಸರಿ. ಹಳ್ಳಿಯ ಪ್ರಶಾಂತ ವಾತಾ ವರಣದಲ್ಲಿ ಲೇಖಕರಾದವರು ಒಳ್ಳೆಯ ಕೃತಿರಚನೆ ಮಾಡಬಹುದು–ಎಂದು ಹಲವರು ಹೇಳುತ್ತಾರೆ. ಆದರೆ ಲೇಖನಕ್ಕೆ ಪ್ರಚೋದನೆ ಹಳ್ಳಿಯಲ್ಲಿ ದೊರೆ ಯುವದಿಲ್ಲ. ಜೀವನಕ್ಕೆ ಬೇಕಾದ, ಇಷ್ಟವಾದ ಗದ್ದಲ ಅಲ್ಲಿರುವದಿಲ್ಲ. ಸಹ ವಾಸಕ್ಕೆ ತಕ್ಕ ಎಡೆ, ವಿರಾಮಕ್ಕೆ ತಕ್ಕ ಅವಕಾಶ, ವಿಲಾಸಕ್ಕೆ ತಕ್ಕ ಅನು ಕೂಲತೆಗಳು ಪಟ್ಟಣಕ್ಕೇ—ಅದೂ ಮುಂಬಯಿಗೇ ಸರಿ.

ಪ್ರಕಾಶನಿಗೆ ಸಂಧ್ಯಾ ದೊರೆತದ್ದು ಆಕಸ್ಮಿಕ ಪ್ರಸಂಗವೇ. ಅವಳನ್ನು ಅವನು ಟೈಪಿಸ್ಟಳನ್ನಾಗಿ, ಕಾರ್ಯದರ್ಶಿನಿಯನ್ನಾಗಿ ದಕ್ಕಿಸಿಕೊಂಡದ್ದು ಮುಂಬಯಿಯಲ್ಲಿಯೇ. ಆದರೆ ಅವಳನ್ನು ಕಳೆದುಕೊಂಡದ್ದು ಮಾತ್ರ ಪ್ರಶಾಂತವಾದ ಹಳ್ಳಿಯಲ್ಲಿ.

## ೨

ಮುಂಬಯಿಯಲ್ಲಿ ಹೆಸರನ್ನೂ ಕೀರ್ತಿಯನ್ನೂ ಗಳಿಸಿಕೊಂಡ ಪ್ರಕಾಶ ತನ್ನ " ಆರ್ಟ ಆಫ್ ಇಂಡಿಯಾ " ಮಹಾಕೃತಿಯನ್ನು ರಚಿಸಲು ತೊಡಗಿದಾಗ ಜಾನಪದ ಕಲೆಗಳ ಅಭ್ಯಾಸ ಮಾಡುವ ಸಲುವಾಗಿ ಒಂದೆರಡು ಸಲ ತಾನೊಬ್ಬನೇ ತನ ಹುಟ್ಟೂರನ್ನು ಹೊಕ್ಕು ಬಂದ. ಅಲ್ಲಿ ತಾನು ಹುಟ್ಟಿ ಬೆಳೆದ ದಿನಗಳಲ್ಲಿ ಕಂಡ ಅಚ್ಚೊತ್ತಿದ ಸ್ಥಿತಿಗೂ, ಈಗಿನ ಪರಿಸ್ಥಿತಿಗೂ ಮಹದಂತರ ಕಂಡುಬಂತು. ಜನರ ಇರುವಿಕೆ, ಅವರ ಕಲಾಭಿರುಚಿಗಳು, ಅವರ ಹವ್ಯಾಸಗಳು ವಿಚಿತ್ರವಾಗಿ ಪರಿವರ್ತನ ಹೊಂದಿದ್ದವು. ಕೇವಲ ಕಲ್ಪನೆಯಿಂದ, ಹಳ್ಳಿಯಲ್ಲಿ ಹುಟ್ಟಿ ಬೆಳೆದದ್ದೆಂಬ ನೆಪದ ಅಧಿಕಾರದಿಂದ ಅಲ್ಲಿನ ಕಲೆಯ ಬಗೆಗೆ ಬರೆದರೆ—ತನ್ನ ಕೃತಿ ಅವಾಸ್ತವವಾಗಿ, ಟೀಕೆಗೆ ಗುರಿಯಾಗಬಹುದೆಂದು ಹೆದರಿ ಹಳ್ಳಿಯಲ್ಲಿಯೇ ಕೆಲಕಾಲ ನಿಂತು ವಿಷಯ ಸಂಗ್ರಹಿಸಬೇಕೆಂದು ಸಂಧ್ಯಾಗೆ ಹೇಳಿದ.

ಪಟ್ಟಣದಲ್ಲಿಯೇ ಬೆಳೆದ ಸಂಧ್ಯಾ ಹಳ್ಳಿಯ ವಿಷಯವೊಂದನ್ನೂ ಕಂಡರಿಯಳು. ಅದೊಂದು ಬದಲಾವಣೆ—ನೋಡೋಣ ಅನ್ನಿಸಿತವಳಿಗೆ. ' ಆಗಲಿ ' ಎಂದಳು.

ತನ್ನ ವಿಷಯಸಂಗ್ರಹಕ್ಕೆ ತನ್ನ ಹಳ್ಳಿಯಾದರೆ—ಸಂಧ್ಯಾನ ಸಹವಾಸದ ಕಾರಣದಿಂದಲಾದರೂ ಆತಂಕ ಬರಬಹುದೆಂದು ಬಗೆದು ಪ್ರಕಾಶ ವಿಜಾಪುರ ಜಿಲ್ಲೆಯನ್ನು ಆರಿಸಿಕೊಂಡ. ಅಡಿಗೆಗೂ, ಮೇಲಿನ ಕೆಲಸಕ್ಕೂ ಇರಲಿ—ಎಂದು ಜತೆಗೆ ನಾರಾಯಣನನ್ನು ಕರೆದುಕೊಂಡು, ಸಾಮಾನುಗಳನ್ನು ಸಾಗಿಸಿಕೊಂಡು ಒಂದು ದಿನ ಈ ಕೃತಿ ರಚನಾ ಸಮಿತಿ ವಿಜಾಪುರದಲ್ಲಿ ಬಂದಿಳಿಯಿತು.

ಅಲ್ಲಿ ಡಾಕ ಬಂಗ್ಲೆಯಲ್ಲಿ ಬಿಡಾರಮಾಡಿ, ಪತ್ರಿಕಾ ಪ್ರತಿನಿಧಿಗಳನ್ನು ಕರೆಸಿಕೊಂಡು ಚರ್ಚಿಸಿ ತಮ್ಮ ಕೆಲಸಕ್ಕೆ ಅನುಕೂಲವಾದ ನಿಟ್ಟನ್ನು ಆರಿಸಿಕೊಂಡರು.

ರೈಲು ಹರಿದ ಹಳ್ಳಿಯಾದರೆ ಅನುಕೂಲ. ಏನಾದರೂ ಸಾಮಾನು ಬೇಕಿದ್ದರೆ ಪಟ್ಟಣಕ್ಕೆ ನಿಲುಕುವಂತಿರಬೇಕು. ಟಪಾಲಿನ ಸಂಪರ್ಕಕ್ಕೆ, ದಿನ

ತ್ರಿಕೆಗಳ ಅವಲೋಕನೆಗೆ ಅವಕಾಶವಿರಬೇಕು—ಎಂದು ತಾಲೂಕಿನ ಸ್ಥಳ ನಾದಾಮಿಯನ್ನು ಆರಿಸಿಕೊಳ್ಳಲಾಯಿತು.

ಜನರಿಂದ ವಿಷಯ ಸಂಗ್ರಹಿಸಬೇಕಾದರೆ ಅವರಿಗೆ ತನ್ನ ಪರಿಚಯ ಮಾಡಿಕೊಡಬೇಕು; ತನ್ನ ಕೆಲಸದ ಮಹತ್ವವನ್ನು ಹೇಳಬೇಕು—ಎಂದೆಲ್ಲಾ ಚಿಂತಿಸುತ್ತ ಪ್ರಕಾಶ ಒಂದು ದಿನ ಮೇಣಬಸ್ತಿಯನ್ನು ನೋಡಲೆಂದು ಹೋದ. ಸಂಧ್ಯಾ ತನ್ನ ಕೆಮೆರಾದಲ್ಲಿ ಅದರ ಚಿತ್ರಗಳನ್ನು ಹಿಡಿದು ಕೊಂಡಳು. ಮತ್ತೊಂದು ದಿನ ಬನಶಂಕರಿಯಾಯಿತು. ಮುಂದೆ ಹಾಗೇ ಎಲೆ ತೋಟಗಳನ್ನು ಹಾಯ್ದು ಯೋಗಾಶ್ರಮವನ್ನು ಸೇರಿದರು. ಅಲ್ಲಿಯ ವಾತಾವರಣ ರಮ್ಯವಾಗಿ ಕಂಡಿತು. ಪಟ್ಟಣದ ಅನುಕೂಲತೆಗಳು ಇಲ್ಲದೆ ಹೋದರೂ ಹಳ್ಳಿಯ ತೊಂದರೆಗಳೂ ಅಲ್ಲಿ ಇಲ್ಲವೆಂದು ಭಾವಿಸಿದರು. ಯೋಗಾಶ್ರಮದ ಸ್ವಾಮಿಗಳು ಇವರನ್ನು ಆತ್ಮೀಯರಂತೆ ಬರಮಾಡಿಕೊಂಡರು. ಕುಶಲ ಸಂಭಾಷಣೆ ನಡಸಿದರು. ಇವರ ಉಚ್ಚ ಆದರ್ಶ ಕೇಳಿ ಎಲ್ಲ ಅನುಕೂಲತೆ ಒದವಿಸುವದಾಗಿ ಅಪ್ಪಣೆ ಕೊಡಿಸಿದರು. ಸಂಧ್ಯಾ—ಪ್ರಕಾಶ ಅಲ್ಲೇ ನಿಂತು ನಾರಾಯಣನಿಂದ ಬಾದಾಮಿಯಲ್ಲಿದ್ದ ಗಂಟು–ಗದಡಿ ತರಿಸಿಕೊಂಡರು.

ಸಂಧ್ಯಾ—ಪ್ರಕಾಶರು ಇರುವ ರೀತಿ ಸಲಿಗೆಯದಾಗಿತ್ತು. ಪ್ರಕಾಶ ಎಂದಿಷ್ಟು ಯಜಮಾನನ ಠೀವಿಯಲ್ಲಿ ಆಜ್ಞೆ ಮಾಡಿದರೆ ಸಂಧ್ಯಾ ಯಜಮಾನಿಯ ಠೀವಿಯಲ್ಲೇ ಅದನ್ನು ಉಲ್ಲಂಘಿಸುತ್ತಿದ್ದಳು. ಸ್ವಾಮಿಗಳು ಇವರನ್ನು ಕಂಡಾಗಿನಿಂದ ದಂಪತಿಗಳೇ ಎಂದು ತಿಳಿದುಕೊಂಡವರು ದೂರದ ಯಾತ್ರಿಕನೊಬ್ಬನಿಗೆ ಪರಿಚಯ ಹೇಳುವಾಗ ಹಾಗೇ ಹೇಳಿದರು. ಆ ಒಂದು ಕ್ಷಣ ಪ್ರಕಾಶ ತಬ್ಬಿಬ್ಬಾದ. ಸಂಧ್ಯಾ ಏನೆಂದುಕೊಂಡಳೋ ಎಂದು ನೋಡಿದಾಗ ಅವಳು ತುಂಟ ನಗೆ ಬೀರಿದಳು. ಅದು ಉಪಹಾಸವೆಂದು ಬಗೆದ ಪ್ರಕಾಶ ಸಾವರಿಸಿಕೊಂಡು "ಇವರು–ಇವರು ಸಂಧ್ಯಾ—ನನ್ನ ಹೆಂಡತಿಯಲ್ಲ—ನನ್ನ ಟೈಪಿಸ್ಟ್. ಕಾರ್ಯದರ್ಶಿ ಎನ್ನಿರಿ ಬೇಕಾದರೆ. ನನಗಿನ್ನೂ ಮದುವೆಯೇ ಆಗಿಲ್ಲ" ಎಂದ.

ಆ ಕ್ಷಣವೇ ಸಂಧ್ಯಾ ಮುಂದೆ ಬಂದು "ನನಗೆ ಮಾತ್ರ ಮದುವೆಯಾಗಿದೆ" ಎಂದಳು.

ಸ್ವಾಮಿಗಳಿಗೆ ಈ ರೀತಿ ಹೊಸದು. ಅವರು ಈ ಪದರುಗಳನ್ನು ಪರಕಿಸುವ ಗೊಡವೆಗೇ ಇಳಿಯದೆ "ಸಂತೋಷ, ಸಂತೋಷ" ಎನ್ನುತ್ತ ಅಲ್ಲಿಂದ ಕಾಲ್ದೆಗೆಯಬೇಕೆಂದಾಗ ಆ ಯಾತ್ರಿಕ ಸಂಧ್ಯಾಗೆ ಕೇಳಿಯೇ ಬಿಟ್ಟ: "ತಮ್ಮ ಯಜಮಾನರು ಏನು ಮಾಡುತ್ತಾರೆ, ಎಲ್ಲಿದ್ದಾರೆ?" ಎಂದು.

ಸಂಧ್ಯಾ ನಗುತ್ತ, "ಇಲ್ಲೇ ಇದ್ದಾರೆ. ತಡವಿದರೆ ಕಟಪಟ ಸಪ್ಪಳ ಮಾಡುತ್ತಾರೆ"ಂದು ಹೇಳುತ್ತ ತನ್ನ ಪೋರ್ಟೆಬಲ್ ಟೈಪರೈಟರ್ ತೋರಿಸಿದಳು.

ಎಲ್ಲರೂ ನಗುವಂತಾಯಿತು. ಮುಂದೆ ಸ್ವಾಮಿಗಳಿಗೆ ಚರ್ಚೆ ಬೇಡವಾಗಿ ಪೂಜೆಯ ನೆಪದಿಂದ ಅಲ್ಲಿಂದ ಕಾಲ್ದೆಗೆದರು.

೩

ಮುಂಬಯಿಯಲ್ಲಿ ಕಳೆದ ಕೆಲವು ವರುಷಗಳಿಂದ ಸಂಧ್ಯಾ-ಪ್ರಕಾಶ ಕೂಡಿಯೇ ಪಿರಿ-ಪಿರಿ ತಿರುಗಿದ್ದಾರೆ. ಅನೇಕ ಸಭೆ-ಸಮ್ಮೇಲನಗಳಿಗೆ ಹೋಗಿದ್ದಾರೆ. ಅನೇಕ ಜನರನ್ನು ಕಂಡಿದ್ದಾರೆ. ಅನೇಕರಲ್ಲಿ ಚಹಾಕ್ಕೆ ಹೋಗಿದ್ದಾರೆ. ಅನೇಕರನ್ನು ಚಹಾಕ್ಕೆ ಆಮಂತ್ರಿಸಿದ್ದಾರೆ. ಆದರೆ ಯಾರೂ ಈವರೆಗೆ ಇವರ ಸಂಬಂಧವನ್ನು ಕೆಣಕಿ ಕೇಳಿದ್ದಿಲ್ಲ. ಮಿಸ್ ಸಂಧ್ಯಾ—ಎಂದರೆ ಅವಳ ಪರಿಚಯ ಸಾಕಾಗಿತ್ತು. ಇಲ್ಲಿ—ಯೋಗಾಶ್ರಮದಂಥ ಸ್ಥಳದಲ್ಲಿ ಹೆಸರಿಗಿಂತ ಇರುವಿಕೆಗೆ, ಸಂಬಂಧಕ್ಕೆ ಮಹತ್ವವಿದೆ. ಹೆಣ್ಣು ಬರೀ ವ್ಯಕ್ತಿಯಾಗಿ ತನ್ನ ಕಾರ್ಯಗೌರವದಿಂದ ಇರಲಾರಳು. ಅವಳ ಬಾಳಿಗೆ ಇವಕ್ಕೂ ಗುರುತರವಾದ ಹೊಣೆಗಾರಿಕೆಯಿದೆ. ಅವಳು ಮಡದಿಯಾಗಿ, ತಾಯಾಗುವ ಪಾತ್ರತೆಯನ್ನು ಪಡೆಯಬೇಕು. ತಾಯಾಗಿ ಲೋಕವನ್ನು ಮುನ್ನಡೆಸಬೇಕು. ಗೃಹಿಣಿಯಾಗಿದ್ದುಕೊಂಡು ಮನೆಯಲ್ಲಿಯೇ ತನ್ನ ಸರ್ವಸ್ವವನ್ನು ಕಂಡುಕೊಳ್ಳಬೇಕು. ಮಿಸ್ ಸಂಧ್ಯಾ—ಎಂಬ ಕೇವಲ ನಾಮಕರಣದಿಂದ ಅವಳ ವಿದ್ಯಾ-ಬುದ್ಧಿ, ಅವಳ ಸಾಮಾಜಿಕ ಕಾರ್ಯ ಗೌರವಗಳು, ವ್ಯಕ್ತಿತ್ವದ ಮಹತಿ—ಇದಾವುದೂ ಅವಳ ಪರಿಪೂರ್ಣತೆಯ ಕುರುಹುಗಳಾಗವು. ಈ ಪ್ರಜ್ಞೆಯನ್ನು ಸಂಧ್ಯಾ ಪ್ರಥಮತಃ ಯೋಗಾಶ್ರಮದಲ್ಲಿ ಸ್ವಾಮಿಗಳ ಪರಿಚಯದಿಂದ ಕಂಡುಕೊಂಡಳು.

ನೇಕ ಸಲ ಇಂಥ ಸಂಬಂಧ ಹಚ್ಚಿ ಜನ ಆಡಿಕೊಂಡಾಗ ಪ್ರಕಾಶ ನಕ್ಕು, ಯಾಕಾಗಬಾರದು-ಎಂದಿದ್ದನಾಗಲಿ ನಿರಾಕರಿಸಿ ಇಂದಿನಂತೆ ಚೆಲ್ಲಿ ಕೊಟ್ಟಿರ ಲ್ಲಿ. ಆದರೆ ಈವರೆಗಿನ ಅವನ ನಗೆಮಾತಿಗೆ ಯಾವ ಹೊಣೆಯೂ ಇದ್ದಿಲ್ಲ. ಬಂದೆ ಆ ಮಾತು ಯಾವ ಸಂಬಂಧಕ್ಕೂ ಕಾರಣವಾಗಿದ್ದಿಲ್ಲ. ಆದರೆ ಂದು ಯೋಗಾಶ್ರಮದ ಆ ರಮ್ಯ ಸ್ಥಳದಲ್ಲಿ ಅವನು ಒಪ್ಪಿಗೆ ಸೂಚಿಸಲು ಯಾಕೆ ಸಮ್ಮತಿಸದಾದ? ಜೀವನ ರಂಗಸ್ಥಳದಲ್ಲಿ ಗಂಡು-ಹೆಣ್ಣು ತೀರ ತ್ಮೀಯವಾದ ಅವಸ್ಥೆ ಪಡೆಯುವದೆಂದರೆ, ಸಾಮಾಜಿಕ ಶಾಸನಕ್ಕೆ ಒಳ ಡುವುದೆಂದರೆ, ಗೌರವಯುತವಾಗಿ ಬಾಳುವದೆಂದರೆ ಗಂಡ-ಹೆಂಡತಿ ಎಂದು ಮ್ಮ ಸಂಬಂಧವನ್ನು ಸಾರಬೇಕಾಗುತ್ತದೆ. ವಿಧಿ-ವಿಧಾನಗಳು ಸಮಾಜಕ್ಕೆ ೯ಕೇ ಎಂದಿಲ್ಲ. ಆದು ಶಾಸನಕ್ಕೆ--ತಕರಾರುಗಳಿಗೆ ಬೇಕಾದೀತು. ಆದರೆ ನಾವು ಗಂಡ-ಹೆಂಡತಿ' ಎಂದು ಯಾರಿಗಾದರೂ ಎಡೆ-ಎಡೆಗೆ ಸಿದ್ಧಮಾಡಿ ೋರಿಸಬೇಕಾಗಿಲ್ಲ. ಒಂದು ಗಂಡು, ಒಂದು ಹೆಣ್ಣು ವಿವಾಹಬಾಹಿರವಾಗಿ ರ್ತಿಸುವ ಸಲಿಗೆಯನ್ನು ಸಮಾಜ ಒಪ್ಪುವದಿಲ್ಲ.

ಮುಂಬಯಿ ಸಮಾಜದಲ್ಲಿ ಇಂಥ ಒಪ್ಪಿಗೆಯ ಪ್ರಶ್ನೆಯೇ ಇಲ್ಲ. ಅಲ್ಲಿನ ನದ್ದು ಗಡಿಬಿಡಿಯ ಜೀವನ. ನೀತಿಯ ದಾರ ಒಂದಿಷ್ಟು ಉದ್ದವಾಗಿರ ಹುದು. ಆದರೂ ತತ್ವತಃ ನೀತಿಯೆಂಬುದು ಅಲ್ಲಿಯೂ ಇದೆ. ಅದರ ್ಯಾಖ್ಯಾನ ಹಳ್ಳಿಯ ತಿಳುವಳಿಕೆಗಿಂತ ತೀರ ಭಿನ್ನವಾದದ್ದೇನಲ್ಲ.

ಸಂಧ್ಯಾ-ಪ್ರಕಾಶರ ಇಷ್ಟು ದಿನದ ಇರವನ್ನು ಇಂಥ ಒಂದು ಪ್ರಜ್ಞೆ ಃವರೆಗೆ ಕೆಣಕಿದ್ದಿಲ್ಲ. ಇಲ್ಲಿ ಯೋಗಾಶ್ರಮದಲ್ಲಾದರೆ—ಯಾರೂ ಇವರ ಂಬಂಧವನ್ನು ಒರೆಗೆ ಹಚ್ಚಲಿಲ್ಲ. ಆದರೆ ಈ ಒಂದು ಬಗೆಯ ಇರವಿಗೆ, ಂಬಂಧಕ್ಕೆ ಪರಂಪರೆಯಲ್ಲಿ ಯಾವ ಅರ್ಥವಿದೆ ಎಂಬ ಮೀಮಾಂಸೆ ಸಂಧ್ಯಾ ್ರಕಾಶರನ್ನು ಕಾಡಿತು. ಪ್ರಕಾಶ ಅಂದು, ಆ ಕ್ಷಣ, ಅವಳು—ಸಂಧ್ಯಾ ತನ್ನ ಹೆಂಡತಿಯಲ್ಲ ಎಂದು ಯಾಕೆ ಹೇಳಿದ—ಎಂಬುದೇ ಸಂಧ್ಯೆಗೆ ಸಮಸ್ಯೆಯಾ ಯಿತು. ನಾನು ಅವನಿಗೆ ಬರೀ ಒಬ್ಬ ಟೈಪಿಸ್ಟ್. ಈ ಟೈಪ್‌ರೈಟರ್ ನಾನು ಬೆರಳಾಡಿದಂತೆ ನಿರ್ಜೀವವಾದ ಅಕ್ಷರಗಳನ್ನು ಮೂಡಿಸುತ್ತದೆ. ಹಾಗೆಯೇ ಾನು ಅವನಾಡಿದ—ಅವನು ಹೇಳುವ ಮಾತುಗಳನ್ನು ಹೀಗೆ ಮೂಡಿಸುವ ಂದು ಸಾಧನ—ಯಂತ್ರ ಮಾತ್ರವಾದೆನಲ್ಲವೇ? ಪ್ರಕಾಶ ಹೇಳುವ ಮಾತು

ಗಳಿಗೆ, ವಿಷಯಕ್ಕೆ ನನ್ನ ವ್ಯಕ್ತಿತ್ವದಿಂದ, ನನ್ನ ಸಹವಾಸದಿಂದ, ನನ್ನ ಹಾಜರಿಯಿಂದಾದರೂ—ಒಂದಿಷ್ಟು ಪ್ರಚೋದನೆ, ಒಂದಿಷ್ಟು ಸಂವೇದನೆಯುಂಟಾಗಿರಲಾರದೇನು? ಅವನಿಗೆ ಅಂಥ ಬಣ್ಣದ ಮಾತು ಎಲ್ಲಿಂದ ಬರುತ್ತವೆ? ನನ್ನ ಸ್ನೇಹ ಪ್ರಕಾಶನ ಕೃತಿಗೆ ಯಾವ ರಕ್ಷೆಯೂ ಅಲ್ಲವೇ? ನನಗೆ ಯಾವ ರಕ್ಷೆಯನ್ನೂ ಕೊಡದೆ ಪ್ರಕಾಶ, ಕೇವಲ ಟೈಪಿಸ್ಟ—ಎಂದು ಚೆಲ್ಲಿ ಕೊಡಬಹುದೇ? ಇವನ ಈವರೆಗಿನ ಬರವಣಿಗೆಯಲ್ಲಿ, ಅವನು ಹೇಳಿದ ಮಾತುಗಳಲ್ಲಿ ನಾನು ಬರೀ ಅಕ್ಷರಗಳನ್ನು ಮೂಡಿಸಿದ್ದೇನೆಯೆ? ಆ ನಿರ್ಜೀವ ಅಕ್ಷರಗಳಲ್ಲಿ ಜೀವಂತ ಅರ್ಥವನ್ನು, ಧ್ವನಿಯನ್ನು ಕಂಡೆವೆಂದು, ಕೇಳಿದೆವೆಯೆಂದು ಹೇಳುವ ವಾಚಕರ ಮಾತು ನಿಜವೇ—ಸುಳ್ಳೇ? ಆಡಿದ ಮಾತುಗಳು, ಬರೆದ ಅಕ್ಷರಗಳು ತಂತಾನೆ ಅರ್ಥವನ್ನು—ಧ್ವನಿಯನ್ನು ಹೊಂದುವುದಾದರೆ ಯಾರಾದರೂ ಯಾಕೆ ಲೇಖಕರಾಗುವದಿಲ್ಲ?

"ಟೈಪಿಸ್ಟ್"—ಟೈಪರ್‍ರೈಟರದಂಥ ಒಂದು ನಿರ್ಜೀವ ಯಂತ್ರ. ರೇಲ್ವೇ ಎಂಜಿನ್ ನಡಿಸುವ ಡ್ರಾಯವ್ಹರನಿಗೆ ಆಧೀನವಾಗಿರುವಂತೆ, ನನ್ನ ಟೈಪ್‌ರೈಟರ್. ಗಾರ್ಡನಿಗೆ ಅವನು ಆಧೀನವಾಗಿರುವಂತೆ ನಾನು. ಕೇವಲ ವ್ಯವಹಾರ ಸಂಬಂಧ! ಛೇ ಛೇ! ಜೀವನದ ಮೌಲಿಕತೆ ಈ ಯಂತ್ರವತ್ತಾದ ಕೆಲಸದಲ್ಲಿಲ್ಲ. ಅದರ ಕ್ರಿಯೆಗೆ ಪ್ರಚೋದನೆ ಕೊಡುವ, ಆ ಕ್ರಿಯೆಯಿಂದ ಒಂದು ಗುರಿಯನ್ನು ತಲುಪುವ ಅರ್ಥವೇ ನಿಜವಾದದ್ದು—ಎಂದವಳು ಚಿಂತಿಸಿದಳು.

ಮರುದಿನ ಸ್ವಾಮಿಗಳ ಕರೆ ಬಂದಾಗ ಹೊರಟು ನಿಂತ ಪ್ರಕಾಶನೊಡನೆ ಸಂಧ್ಯಾ ಹೊರಡಲಿಲ್ಲ. 'ನನಗಲ್ಲೇನು ಕೆಲಸ?' ಎಂದಳು. ಪ್ರಕಾಶನಿಗೂ ಚುಚ್ಚಿದಂತಾಯಿತು. ಬಹು ದಿನದ ಅಭ್ಯಾಸದಿಂದ ಅವನು ಅದಕ್ಕೆ ಅಂಥ ಗಮನ ಕೊಡದೆ "ಯಾಕೆ ಸಂಧ್ಯಾ?" ಎಂದ.

"ನಾನು ಈ ಯಂತ್ರದಂತೆ ನಿಮಗೆ. ನಾನದನ್ನು ಕುಣಿಸುತ್ತೇನೆ; ನೀವು ನನ್ನನ್ನು ಕುಣಿಸುತ್ತೀರಿ. ನಾನು ನಿಮಗೆ ಟೈಪಿಸ್ಟ ಮಾತ್ರ ಅಲ್ಲವೆ?" ಎಂದಳು. ಪ್ರಕಾಶನಿಗೆ ಆಗ ಈ ಪ್ರಶ್ನೆ ಆಳದ್ದೆಂದು ಹೊಳೆಯಿತು. "ಸಂಧ್ಯಾ, ನೀನು ನನ್ನ ಫ್ರೆಂಡ್, ಕಾರ್ಯದರ್ಶಿ, ಟೈಪಿಸ್ಟ್—ಎಲ್ಲಾ ಆಗಿರುವಿ. ಬರೀ

ಯಂತ್ರ ಯಾಕಾದಿ?" ಎಂದರೆ "ನಿನ್ನೆ ನೀವು 'ಫ್ರೆಂಡ್' ಎಂದು ಹೇಳಲು ಹಿಂಜರಿದಿರೇಕೆ?" ಎಂದಳು.

ಫ್ರೆಂಡ್ ಅಂದರೆ ಏನರ್ಥ? ಸ್ನೇಹದ ಸಂಕೇತವಾದ ಆ ಶಬ್ದ ಭಿನ್ನ ಲಿಂಗದೊಡನೆ ವಿಶೇಷಾರ್ಥವನ್ನೂ ಹೊತ್ತು ತರುತ್ತದೆಂದು ಪ್ರಕಾಶನ ವಿಚಾರ. 'ಗೆಳತಿ!' ಬರೇ ಗೆಳತಿಗೆ ತೀರ ತೇಲುವ ಅರ್ಥವಿದೆ. ಗೆಳತಿ ಬಾಳ ಗೆಳತಿಯಾದಾಗಲೇ ಸಾರ್ಥಕವೆಂದು ಅವನ ವಿಚಾರ ಹರಿಯಿತು. ಅಂತೆಯೇ ಹೆಣ್ಣಿನ ಸ್ನೇಹವನ್ನು ಜನ ಎಲ್ಲ ಸಂದರ್ಭಗಳಲ್ಲಿಯೂ 'ತಂಗಿ', 'ಸೋದರಿ' ಎಂದು ಹೇಳಿ ತಮ್ಮ ಸ್ನೇಹವನ್ನು ಕಾಪಾಡಿಕೊಳ್ಳುತ್ತಾರೆ. ಸಂಧ್ಯೆಯನ್ನು ಪ್ರಕಾಶ 'ತಂಗಿ' ಎನ್ನಲಾರ. 'ಗೆಳತಿ' ಎಂದಾನು;—ಬಾಳಗೆಳತಿ ಎಂದು ಅನ್ನಲು ಇನ್ನೂ ವಿಚಾರ ಹಣ್ಣಾಗಿಲ್ಲ. ತನ್ನ 'ಭಾವದೇವಿ' ಯಾದ ಅವಳನ್ನು ಸಾಮಾಜಿಕ ಪರಿಭಾಷೆಯಲ್ಲಿ ಏನೆಂದು ಸಾರಬೇಕೆಂದು ಇನ್ನೂ ಅವಳೊಡನೆ ವಿಚಾರ ವಿನಿಮಯಮಾಡಿ ನಿರ್ಧಾರಕ್ಕೆ ಬಂದಿಲ್ಲ. ಈ ವಿಷಯ ಚರ್ಚೆಗೆ ಗುರಿಯಾಗಬಾರದೆಂದೂ ಅವನಿಗೆ ಹೊಳೆಯಲಿಲ್ಲ.

ತನ್ನ ಕೃತಿಗಳ ಪಾತ್ರಗಳ ಸಂಬಂಧಗಳ ಬಗ್ಗೆ ಸಂಧ್ಯೆಯೊಡನೆ ಅನೇಕ ಸಲ ಚರ್ಚಿಸಿದ್ದಾನೆ. ಅನೇಕ ಸಲ ಸಾಂಕೇತಿಕವಾದ ಮಾತಿನಿಂದ ಸಂಬಂಧವನ್ನು ತೇಲಿಸಿ ನುಡಿಯಬೇಕೆಂದು ವಾದಿಸಿದ್ದಾನೆ. ಬರಹದ ಪಾತ್ರಗಳಲ್ಲಿ ಬುದ್ಧಿಗಮ್ಯವಾದ ಮಾತಿನ ಚಕಮಕಿ ಬೇಕೆಂದು ಸಂಧ್ಯಾ ಪ್ರಕಾಶನ ಕೂಡ ಜಗಳ ಮಾಡಿದ್ದಾಳೆ. ಈ ವಾದಭೂಮಿ ತನ್ನ ಜೀವನಕ್ಕೇ ಅನ್ವಯಿಸುವಾಗ ಪ್ರಕಾಶ ಸಂಕೇತ ಶೂನ್ಯನಾಗಿದ್ದಾನೆ. ಸಂಧ್ಯಾ ಚರ್ಚಾಶೂನ್ಯಳಾಗಿದ್ದಾಳೆ.

ಈ ಶೂನ್ಯ ಅವರಿಬ್ಬರ ನಡುವೆ ಬಿಗುಮಾನವಾಗಿ ಬೆಳೆದು ನಿಂತಿತು. ಅಷ್ಟು ಹತ್ತಿರ–ಹತ್ತಿರವಿದ್ದವರು ಮನಸ್ಸಿನಿಂದ ದೂರ ದೂರವಾಗತೊಡಗಿದರು. ಸಾಮೀಪ್ಯ ಅವರಿಗೆ ವೇದನೆಯಾಗತೊಡಗಿತು. ಇಬ್ಬರೂ ಬಯಸುವ ಒಂದು ವ್ಯವಸ್ಥೆ ವಿಚಾರದ ಭಿನ್ನ ರೀತಿಯಿಂದ, ಭಿನ್ನ ಮಾರ್ಗದಿಂದ ಕೂಡದ ಸುತ್ತಿನ ದಾರಿಯಾಯಿತು. ಒಂದು ಜೀವ ಮಾತಿನ ಒಪ್ಪಿಗೆ ಬೇಡಿದರೆ ಇನ್ನೊಂದು ಜೀವ ಮಾತು ಅರ್ಥಹೀನವೆಂದಿತು.

ಆದರೆ ಪ್ರಕಾಶ ಸಂಧ್ಯೆಯೊಡನಿದ್ದ ತನ್ನ ಸಂಬಂಧದ ಬಗ್ಗೆ, ಅದರ ಸಾಮಾಜಿಕ ಸ್ವರೂಪದ ಬಗ್ಗೆ ಒಳಗೊಳಗೇ ತುಂಬ ಹಣ್ಣಾದ. ಇಷ್ಟು ದಿನ ಇವ

ಕೊಡನಾಡಿದ ತನ್ನ ರೀತಿ ಬಾಳ ಪಯಣದ ಸಹಯಾತ್ರಿಕಳನ್ನು ಪಡೆದಂತೆ ಇದ್ದಿಲ್ಲವೇನು?-ಎಂದು ಚಿಂತಿಸುತ್ತಾನೆ. ಅದನ್ನಿಂದು ಒಪ್ಪಿ-ಸಾರಬೇಕಾದರೆ ಬಂದ ಅಡೆ-ತಡೆಗೆ ಕಾರಣವೇನು? ಅವಳ ಅಭಿಪ್ರಾಯ ತಿಳಿಯದೆಂದೇ? ಅದನ್ನು ತಿಳಿಯಲು ಮಾತು ಮುಖ್ಯವೇ? ಇರುವ ರೀತಿ ಸಾಲದೇ?

ಇಂದು ಈ ಸಮಸ್ಯೆ ತಮ್ಮ ಇರುವಿಕೆಗೆ ಅರ್ಥ ಹಚ್ಚುವಷ್ಟು ಜಟಿಲ ವಾಗಲು ಮಾತೇ ಕಾರಣವಲ್ಲವೇ? ಆದರೇನು? ಸಂಧ್ಯೆ ನಿಸ್ಸಂದಿಗ್ಧ ಮಾತಿ ನಲ್ಲಿ ಯಾಕೆ ತನ್ನ ಒಪ್ಪಿಗೆ ಸೂಚಿಸಬಾರದು?....ಅವಳೇಕೆ ಸೂಚಿಸಬೇಕು? ನಾನಾಡಿದ ಮಾತಿನಿಂದಲೇ ಕೂಡುವ ಸಂಬಂಧ, ಕೂಡಿದ ಗೆಳೆತನ ಬಿರುಕು ಬಿಡುವಂತಾಗಿದೆ. ನಾನು ಪ್ರಾಮಾಣಿಕವಾಗಿ ಅವಳನ್ನು ಗೆಳತಿ ಎಂದು ಒಪ್ಪಿರುವೆನೇ?....ಯಾಕೆ ಅಲ್ಲ? ಆದರೇಕೆ ಹೇಳಲಿಲ್ಲ?

ಹೇಳುವದೇನು? ಹೇಳಿದ್ದೇನು? ನನ್ನ ಕಾರ್ಯದರ್ಶಿನಿ, ನನ್ನ ಟೈಪಿಸ್ಟ- ಎಂದಲ್ಲವೇ? ಅದಲ್ಲವೇನವಳು?

ಅವಳು ಅಷ್ಟು ಮಾತ್ರವೇ ಏನು? ಇನ್ನೇನೂ ಅಲ್ಲವೇನು? ಫ್ರೆಂಡ್ ಎಂದರೂ ಸಾಕಾಗಿತ್ತವಳಿಗೆ. ಕೇವಲ ಸಂಬಳದ ಆಳೆಂದು ನಾನು ಹೇಳಿದಂ ತಾಯಿತೇ? ಅವಳು ಹಾಗೆ ಹೇಳಿದೆನೆಂದು ತಿಳಿದುಕೊಂಡಿದ್ದಾಳೆ; ನಿಜ.

ಇದಕ್ಕೇನು ಪರಿಹಾರ ಮಾರ್ಗ? ನಾನೇ ತೋಡಿದ ಕಂದಕ, ನನ್ನ ಮಾತಿನಿಂದಲೇ ಬಿದ್ದ ಕೊರಕಲು, ನನ್ನಿಂದ, ನನ್ನ ಮಾತಿನಿಂದಲೇ ತುಂಬಿ ದಾರಿ ಮಾಡಬೇಕು. ಹೌದು; ಅವಳಲ್ಲಿ ಕ್ಷಮಾಪಣೆ ಬೇಡುವುದು ಒಂದೇ ಮಾರ್ಗ. ಮಾತು ಆಡಿದ್ದು ಇರುವ ರೀತಿಯನ್ನೂ, ಇರಬೇಕಾದ ರೀತಿ ಯನ್ನೂ ಕೆಡಿಸುವದು ಬೇಡ. ನೀನು ನನ್ನ ಗೆಳತಿ; ನನ್ನ ಬಾಳಗೆಳತಿ. ಜನರ ಮುಂದೆಯೂ ನಾನೀಗ ಹಾಗೆ ಹೇಳಬಲ್ಲೆ. ನಾಳೆ ಸ್ವಾಮಿಗಳ ಮುಂದೆಯೇ ಸಾರಿ ಹೇಳುತ್ತೇನೆ; ನೀನು ಮಾತ್ರ ದೂರ ಸರಿಯಬೇಡ—ಎಂದು ಕೇಳಿ ಕೊಳ್ಳಬೇಕು—ಎಂಬ ನಿರ್ಧಾರಕ್ಕೆ ಬಂದ ಪ್ರಕಾಶ ತನ್ನ ಕನಸಿನಲ್ಲಿ ಸಂಧ್ಯೆ ಯೊಡನೆ ವಿಹರಿಸುತ್ತಿದ್ದಾನೆ.

ಆದರೆ ಮರುದಿನ ಎದ್ದು ನೋಡುವಾಗ ಸಂಧ್ಯಾ ಪ್ರಕಾಶನಿಗೆ ಅಲ್ಲಿ ಕಾಣಲಿಲ್ಲ.

# ತೌರಿನ ತಗಾದಿ

ಇವಳಿಗೆ ತೌರು ಮನೆಯ ಹುಚ್ಚು ಎಂದು ಹಿಂದೆಯೇ ಹೇಳಿದ್ದೇನೆ. ನನಗೆ ಇವಳದೇ ಹುಚ್ಚು ಎಂದು ನಮ್ಮ ಮನೆಯಲ್ಲಿ, ಇವಳ ತೌರಿನಲ್ಲಿ ಹೇಳುತ್ತಾರೆ. ಇರಬಹುದು. ಅದಕ್ಕೇ ನಾನು ಇವಳನ್ನು ತೌರಿಗೆ ಕಳಿಸಲು ಒಪ್ಪುವದಿಲ್ಲ ಎಂಬ ಒಂದು ಕಾರಣ ಹೇಳುತ್ತಾರೆ. ನಾನು ಕಳಿಸುವದಿಲ್ಲ ಎಂಬ ಕಾರಣದಿಂದಲೇ ಅವಳಿಗೆ ತೌರುಮನೆಯ ಆಸೆ ಹುಚ್ಚಾಗಿದ್ದೀತು. ಅಂತೂ ನಮ್ಮಿಬ್ಬರಿಗೂ ಒಂದೊಂದು ಹುಚ್ಚು ಎಂದು ಆಡಿಕೊಳ್ಳುವಂತಾಗಿದೆ.

ನಾನು ಇವಳನ್ನು ಕಳಿಸದಿರಲು ಬಲವಾದೊಂದು ಕಾರಣವಿದೆ. ಮನೆಯಲ್ಲಿ ತಾಯಿ-ತಂದೆ—ಹಿರಿಯರಿರುವಾಗ ಕಳಿಸುವವರು, ಕರೆತರುವವರು ಅವರು; ಅದು ಅವರದೇ ಹಕ್ಕು. ಇವಳ ತಾಯಿ ತನ್ನ ಮಗನಿಂದ ನನಗೆ ಬರೆಯಿಸಿ, ಕಳಿಸಲು ಕೇಳಿದರೆ–ನಾನು ಕಳಿಸಿದರೆ ನಮ್ಮ ತಾಯಿಗೆ ಗೌರವ ಕೆಣಕಿದಿದ್ದೀತೇ ? ಹೆಣ್ಣಿನವರು ಮನೆಗೆ ಬಂದು ಹಿರಿಯರನ್ನು ಪ್ರಕಟವಾಗಿ ಕೇಳಿ ಬಿನ್ನವಿಸಿಕೊಂಡು, ಮಗಳಿಂದ ಅಳಿಯನನ್ನು ಕೇಳಿಸಿ, ಯತ್ನಿಸಿ, ಒಮ್ಮೆ ಇಲ್ಲವೆಂದರೆ ಇನ್ನೊಮ್ಮೆ ಒಲಿಸಿ ಮಗಳನ್ನು ಕರೆದುಕೊಂಡು ಹೋಗಬೇಕಾದದ್ದು ನ್ಯಾಯ. ಆಗ ಯಾರಿಗೂ ತೊಂದರೆಯಿಲ್ಲ. ಇದ್ದರೂ ಅದು ಕುಟುಂಬದ ದೃಷ್ಟಿಯಲ್ಲಲ್ಲ. ಕೇವಲ ಗಂಡನ ವೈಯಕ್ತಿಕ ಯಾತನೆ ಬಿಸಿ ತುಪ್ಪ ನುಂಗುವ ಸಮಾಚಾರ.

ನನ್ನ ಬೀಗರು ಹಾಗಲ್ಲ. ಅವರು ಕೆಲಸದವರಂತೆ. ' ರಜೆ ಸಿಕ್ಕುವದಿಲ್ಲ, ಇಂಥ ದಿನ ಸ್ಟೇಶನ್ನಿಗೆ ಬರುತ್ತೇವೆ. ತಂದು ಕಳಿಸಿ' ಎಂದು,—ತಿರುಗಿ ಕಳಿಸುವಾಗ ' ಸ್ಟೇಶನ್ನಿನಲ್ಲಿ ಇಳಿಸುತ್ತೇವೆ. ಇಂಥ ಗಾಡಿಗೆ ಬಂದು ಕರೆದುಕೊಂಡು ಹೋಗಿ ' ಎಂದು ವ್ಯವಸ್ಥೆ ಸೂಚಿಸುತ್ತಾರೆ. ಇದು ಎಂಥ ಕುಟುಂಬ !

ಒಮ್ಮೆ ನಮ್ಮ ಕೋರಿಕೆಯಂತೆಯೇ ಮನೆಯ ವರೆಗೂ ನನ್ನ ಬೀಗ ಬಂದರು. ಬಂದವರೇ ' ಕಳಿಸಿರಿ ' ಎಂದರು. ಅಂಗಡಿಯಲ್ಲಿ ತೂಗಿಸಿದ ಬೆಲ್ಲದ ಪೆಂಟೆಯನ್ನು ಒಯ್ದಂತೆ ತಂಗಿಯನ್ನು ಕರೆಯಬರಬಹುದೇ ? ಮತ್ತೆ

ನನ್ನನ್ನು ಕೇಳಲಿಲ್ಲ. ಕರೆಯಲು ಬಂದಿದ್ದಾನೆಂದು ಇವಳೇ ಹೇಳಿದಳು. ' ಅವ್ವನಿಗೆ ಕೇಳಲಿ ' ಎಂದೆ. ಕೇಳಿದ ಅಣ್ಣ. ' ನನ್ನದೇನಪ್ಪಾ—ಅವನನ್ನೇ ಕೇಳು. ನಮ್ಮದೇನಿದೆ–ಅವನು ಕಳಿಸಿದರೆ ನನ್ನದೇನು '—ಎಂದರು, ನನ್ನ ತಾಯಿ. ನನ್ನನ್ನು ಕೇಳಿದರು. ' ಆಗಲಿ ' ಎಂದು ಕಳಿಸಿಕೊಟ್ಟೆ.

ಮುಂದೆ ಮನೆಯಲ್ಲಿ ಏನೇನೋ ತೊಂದರೆಗಳು ಬಂದವು. ನಮ್ಮ ತಾಯಿ ಇವಳು ಹೋದದ್ದಕ್ಕೆ, ನಾನೇ ಕಳಿಸಿದೆನೆಂದು ಹೇಳುತ್ತ ' ಈಗಿನವರೇನು ? ಮನೆಯ ಅಡಚಣಿ ನೋಡಿದವರಲ್ಲ. ಹಿರಿಯರ ಗೊಡವೆಯೇ ಇಲ್ಲ. ಅವನನ್ನು ಕೇಳಿದ; ಅವನು ಕಳಿಸಿದ. ಇವಳಿಗಾದರೂ ಮನೆಯ ಕಷ್ಟ–ಸುಖ ತಿಳಿದರಲ್ಲವೇ ? ಈಗ ನಾನಿದ್ದೇನೆ. ಮುಂದಾದರೂ ತಿಳಿದೀತಲ್ಲ '—ಎಂದು ಗೊಣಗಿದರು.

ನನಗೆ ರೇಗಿತು. ಕಳಿಸಿದವನು ನಾನೇ—ಎಂಬ ಆರೋಪ ಹೇಗೆ ಹೊರಲಿ ? ಹಿರಿಯರ ಹೆದರಿಕೆಯಿಂದಾದರೂ ಅವಳು ಉಳಿದಿದ್ದರೆ ನನಗೆ ಸಾಕಾಗಿತ್ತು. ನನ್ನನ್ನು ಕೇಳಹೇಳಿದರೆ–ನಾನು ಬೇಡವೆಂದೆನೆಂದರೆ ' ಅವಳನ್ನು ಬಿಟ್ಟು ಒಂದು ಕ್ಷಣ ಇರಲಾರ '—ಎಂದೆನ್ನಿಸಿಕೊಳ್ಳಬೇಕಾದೀತೆಂದು, ಅವ್ವನ ಒಪ್ಪಿಗೆ ಇದ್ದರೆ ನನ್ನದೇ ಅಡ್ಡಿ ಎಂದಾಗಬಾರದೆಂದು ಕಳಿಸಿದರೆ—ನನ್ನ ಮೇಲೆಯೇ ಮಾತು! ಅಂದೇ ಹೋಗಿ ' ಹೊರಡು ' ಎಂದೆ. ಅಪರೂಪವಾಗಿ ಬಂದಿದ್ದೀರಿ, ಎರಡು ದಿನ ನಿಂತು ಹೋಗಿ ' ಎಂದರು. ' ಸಾಧ್ಯವಿಲ್ಲ ' ಎಂದವನೇ ಕರೆದುಕೊಂಡು ಬಂದೆ. ಮುಂದೆ ಎರಡು ದಿನಕ್ಕೆ ಇವಳ ಅತ್ತಿಗೆಯ ಶ್ರೀಮಂತವಿತ್ತು. ಆದರೂ ಇವಳು ಅಳುತ್ತ ಬೆನ್ನು ಹತ್ತಿ ಬಂದಳು.

ಮನೆಗೆ ಬಂದರೆ ' ಈಗ ಅವಳನ್ನು ಕರೆದುಕೊಂಡು ಬರಲು ಯಾರು ನಿನಗೆ ಹೇಳಿದವರು? ' ಎಂದು ಅಕ್ಕನ ತಕರಾರು ! ' ಎಂಥ ಅತ್ತೆ ' ಎಂದು ತಾನು ಆಡಿಸಿಕೊಳ್ಳುವಂತಾಯಿತಂತೆ ! " ನಾನೂ ಹೆಣ್ಣು ಹಡೆದವಳು. ಅತ್ತೆಯ ಕೈಯಲ್ಲಿ ಉರಿದವಳು. ನಿಮ್ಮ ಮನೆಯಲ್ಲಿ ಶುಭಕಾರ್ಯವಿದ್ದಾಗ ಕರೆತರುವದಕ್ಕೆ ನಾನು ಯಾಕೆ ಹೇಳಲಿ ತಾಯೀ. ಮನೆಯ ಕೆಲಸದ ತ್ರಾಸಿಗೆ ಎರಡು ಮಾತಾಡಿದರೆ ಅದನ್ನೇ ಗುಡ್ಡಾ ಮಾಡಿ ಇವನು ಓಡಿ ಹೋಗಿಬಿಟ್ಟ. ಬೀಗರಲ್ಲಿ ನನ್ನ ಮಾನ ಕಾಸಿಗೆ ಪಂಥೇರು ಮಾಡಿಬಿಟ್ಟ. ನಿನಗಾದರೂ

ತಿಳಿಯಬಾರದೇನವ್ವಾ. ಯಾಕೆ ಬಂದಿ?" ಎಂದು ಇವಳನ್ನು ಮುಂದೆ ಕೂಡಿಸಿಕೊಂಡು ನನಗೆ ಹೊ ಏರಿಸಿದಳು—ನಮ್ಮ ತಾಯಿ.

ಇದಕ್ಕೇನೆನ್ನಲಿ? ಯಾವಾಗ ಆವಳನ್ನು ಕರೆಯುವದಕ್ಕೆ ಬಂದರೂ ಇದೇ ತರಹ-ಒಂದಿಲ್ಲೊಂದು ಮಾತು ಬರುತ್ತದೆ. ನನಗಾದರೇನು? ಕಳಿಸ ಬೇಕೆಂದೇನಿಲ್ಲ. ಇವಳೇ ಆತುರಪಡುತ್ತಾಳೆ; ನಿಜ. ಒಂದು ದಿನ ಹುಚ್ಚಿಯಂತೆ, ಮೂದೇವಿಯಂತೆ ಇರುತ್ತಾಳೆ. ಮುಂದೆ ಎಂದಿನಂತೆ ಹೊಂದಿಕೊಳ್ಳುತ್ತಾಳೆ.

ಇವಳ ಅಣ್ಣನಿಗೆ ಗಂಡುಮಗುವಾಯಿತೆಂದು, ಮಗುವಿನ ನಾಮಕರಣಕ್ಕೆ ಇವಳಿಗೆ ಕರೆ ಬಂತು. ನಾನು ಕಳಿಸುವದಿಲ್ಲವೆಂದೆ. ನಮ್ಮ ಅತ್ತೆಯೇ ಬಂದವರು ಹೊರಟುಹೋದರು. "ನಮ್ಮದೇನು ನಡೆಯುತ್ತದೆ? ಹೆಸರಿಟ್ಟು ಒಂದು ಸೀರೆ ಉಟ್ಟುಕೊಂಡು ಬರುತ್ತಿದ್ದಿ ತಾಯೀ. ನಿನ್ನ ಗಂಡ ಹೀಗೇಕಾಗಿದ್ದಾನೋ-ವೆಂಕಟಪತಿಗೇ ಗೊತ್ತು"—ಎಂದು ತಾಯಿ ಆಡಿಕೊಂ:

ಮುಂದೆ ನಾನೇ ಒಂದು ಅಚ್ಚಿನ ಗುಲಾಬಿ ಪತ್ತಲ ತಂದು ಇವಳ ತವರು ಮನೆಯ ಹೆಸರು ಮಾಡಿದರೆ-ಅವ್ವ ಏನೆಂದಳೆನ್ನುತ್ತೀರಿ? "ಅಪರೂಪದ ಅಳಿಯ ಹುಟ್ಟಿದ್ದಾನೆ ನಿನಗೆ. ನಿಮ್ಮ ಅಣ್ಣ ಕೊಡುವದು ಕೊಟ್ಟು ಈ ಪ್ರವಾಸೀ ಪತ್ತಲ ಯಾಕೆ ಕೊಡಬೇಕು? ಒಂದು ರೇಶ್ಮೆ ಅಂಚಿನ ಸೀರೆ ಭಾರವೇನು ಅವನಿಗೆ?" ಎಂದಳು.

ಅವ್ವ ತಾನೇ ಇವಳಿಗೆ ಕೊಡಿಸುತ್ತಿರುವ ಈ ರೇಶ್ಮೆ ಅಂಚಿನ, ತೋಪು ಸೆರಗಿನ ಸೀರೆ ಇವಳು ಉಡಲು ಭಾರವೆನ್ನುತ್ತಾಳೆ. ಹಣ ತೆತ್ತುವದಂತೂ ನನಗೆ ಕಲ್ಲು ಎಳೆದಂತೆ ಆಗುತ್ತದೆ. ಆದಕ್ಕೇ ಇವಳು ಒಂದು ಹಗುರಾದ ಪತ್ತಲ ಬೇಡಿದ್ದಳೆಂದು ತಂದೆ. ನಾನೇ ತಂದೆನೆಂದರೆ ಅವ್ವನ ಹಕ್ಕು ಕೆಣಕೀತೆಂದು, ಇವಳೇ ಬೇಡಿದಳೆಂದರೆ 'ಕಾರಭಾರ'ವಾದೀತೆಂದು ಈ ಯುಕ್ತಿ ಮಾಡಬೇಕಾಯಿತು. ಅದಕ್ಕೂ ಮಾತು ಬಂತು. ಅದು ಇವಳ ಅಣ್ಣನ ಪಾಲಿನದಿತ್ತು.

ಮುಂದೆ ಒಂದು ವರ್ಷದಲ್ಲಿಯೆ ಇವಳಿಗೆ ಸೋದರಳಿಯನ ಬಾಬು ಎಂದು ಒಂದು ರೇಶ್ಮೆ ಅಂಚಿನ ಸೀರೆಯೇ ಬಂತು. ನಮ್ಮ ಅತ್ತೆಯೇ ತಕ್ಕೊಂಡು ಬಂದರು. ಆಗ ನಮ್ಮ ತಾಯಿ—"ಎರಡೆರಡು ಯಾಕೆ? ಆ

ಪತ್ತಲ ತಕ್ಕೊಂಡು ಹೋಗಿರಿ. ನಿಮ್ಮ ಸೊಸೆಗಾದೀತು" ಎಂದರು. 'ಯಾವ ಪತ್ತಲ?' ಎಂದು ನಮ್ಮತ್ತೆ ಕೇಳಿದರು. ಇವಳು ನಿಂತಲ್ಲೇ ತಾಯಿಗೆ ಕಣ್ಣು ಚಿವುಟಿ ಒದ್ದಾಡಿದರೂ ಅದವರಿಗೆ ತಿಳಿಯಲೇ ಇಲ್ಲ. "ಯಾಕೆ ನಿಮ್ಮ ಮಗನೇ ಕಳಿಸಿದ್ದಾನಲ್ಲ?" ಎಂದು ನಮ್ಮ ತಾಯಿ ಅಂದೇಬಿಟ್ಟರು. ಆಗ ನಮ್ಮತ್ತೆ ಏನೆಂದರೆನ್ನುತ್ತೀರಿ? "ತಂಗಿಗೆ ತಾನೇ ಕಳಿಸಿದ್ದೀತು, ಖೋಡಿ. ನನಗೆ ಹೇಳಿಯೇ ಇಲ್ಲ" ಎಂದರು. ಅದಕ್ಕೆ ಅವ್ವ ಅಂದಳು: "ಅದೇ ಅಂದೆ—ನೀವಾದರೆ ಆ ಸುಡಗಾಡಮಾರೀ ಪತ್ತಲಾ ಯಾಕ ಕಳಿಸತಿದ್ದಿರಿ? ಈಗಿನ ಹುಡುಗೆಯರು ಮೈ ಕಾಣುವಂಥಾ ಅಂಥಾ ಪತ್ತಲಾ ಉಟಕೊಂಡರೆ ನನಗಂತೂ—ನೀವೇನೇ ಅನ್ನಿರಿ ತಾಯೀ—ಅಸಂಯ್ಯ ಸುರೀತದೆ. ಗುಡಾರದ ಹಾಳೀ ಹಾಂಗ, ಮೈತುಂಬ ನಯವಾಗಿ, ಇಳಕಲ್ಲ ಸೀರೀ ಶೋಭಾ ಆ ನಾಜೂಕ ಮಾಂಜರಪಾಟಿನ ಪತ್ತಲಕ್ಕೇನ ಬಂದೀತು?"

ನಮ್ಮ ಅತ್ತೆ ಪತ್ತಲಂಥಾದ್ದೇ ತೆಳ್ಳಗಿನ ಸೀರೆ ಉಟ್ಟುಕೊಂಡವರು ಬೀಗಿತ್ತಿಗೆ ಏನು ಹೇಳಬೇಕು? 'ನಿಮ್ಮ ಮಾತ ಖರೇ' ಅಂದರು. ಎಷ್ಟೆಂದರೂ ಬೀಗಿತ್ತಿ. ಹೆಣ್ಣಿನ ತಾಯಿ ತಾನು!

* * * *

ಮುಂದೆ ಇವಳ ಇನ್ನೊಬ್ಬ ಅಣ್ಣನ ಮದುವೆಗೆ ಇವಳನ್ನು ಕಳಿಸಿದ್ದೆ. ನನ್ನನ್ನೂ ಕರೆದರು. ಅವ್ವನನ್ನು ಆಗ್ರಹಪಡಿಸಲಿಲ್ಲವೆಂದು, ನಾನು ಹೋದರೆ ಹೇಗೆ—ಎಂದು ವಿವಂಚನೆಯಾಯಿತು. ಕೆಲಸದ ನೆವ ಹೇಳಿ, ಆಯತ್ತ ಮದುವೆಗೆ ಬರುತ್ತೇನೆಂದು ಹೇಳಿ ಅವರನ್ನು ಕಳಿಸಿದೆ. ಇವಳು ಹೋಗುವಾಗ ತಾಕೀತು ಮಾಡಿದಳು: "ನನಗೆ ನಮ್ಮ ಮನೆಯವರು—(ತವರಿನವರಿಗೆ ಇನ್ನೂ ಇವಳು 'ನಮ್ಮ ಮನೆಯವರು' ಎನ್ನುತ್ತಾಳೆ. ಆದರೆ ತವರಿನಲ್ಲಿ ನಮ್ಮ ಮನೆಯನ್ನು 'ತನ್ನ ಮನೆ' ಯೆಂದು ಒಪ್ಪುತ್ತಾಳೆ)—ಇಷ್ಟೆಲ್ಲ ಉಡಿಗೆ-ತೊಡಿಗೆ ಕೊಟ್ಟಿದ್ದಾರೆ. ನಿಮಗೂ ಉಂಗುರ, ಗಡಿಯಾರ ಆಗಿದೆ. ಅನಾಯಾಸ ಅಣ್ಣನ ಮದುವೆ ಬಂದಿದೆ. ನೀವು ಬರುವಾಗ ಯೋಗ್ಯ ಉಡುಗೊರೆ ತರಬೇಕು" ಎಂದು.

ಮದುವೆಯ ದಿನವೇನೋ ಹತ್ತಿರ ಬಂತು. ಏನು ಒಯ್ಯಬೇಕೆಂದು ಅವ್ವನನ್ನು ಕೇಳಿದೆ. 'ನನ್ನನ್ನೇನು ಕೇಳುತ್ತೀ? ನಿನ್ನ ಬೀಗ. ಬೇಕಾದ್ದು

ಕೊಡು' ಎಂದಳು. ಒಂದು ಸೂಟಿನ ಬಟ್ಟೆ ಒಯ್ಯಲೇ ಎಂದೆ. 'ನನಗೆ ಈ ಹುಚ್ಚುಚ್ಚಾರ ಆಹೇರ ತಿಳಿಯದಪ್ಪಾ'—ಎಂದಳು. ಇವಳೂ 'ಇಂಥಾದ್ದೇ ತಕ್ಕೊಂಡು ಬನ್ನಿ' ಎಂದು ಹೇಳಿದ್ದಿಲ್ಲ; ನನಗೆ ಮತ್ತೇನೂ ಹೊಳೆಯಲಿಲ್ಲ. ಒಂದು ಉಚಿತ ಸಂಭಾವನೆ ಒಯ್ಯದೆ ನಾನು ಹೋಗುವಂತೆಯೂ ಇರಲಿಲ್ಲ. ಮೈ ಸರಿಯಿಲ್ಲವೆಂದು, ಬರುವದಾಗಲಿಲ್ಲವೆಂದು ತಂತಿಯಿಂದ ಒಂದಿಷ್ಟು ಹಣ ಕಳಿಸಿ ಸುಮ್ಮನೇ ಕುಳಿತೆ.

ಅದರಿಂದ ಎರಡು ಕಾರ್ಯ ಸಾಧಿಸಿದವು. ಉಡುಗರೆಯ ಸಮಸ್ಯೆ ಒಂದು; ಇವಳು ನಾಲ್ಕೇ ದಿನದಲ್ಲಿ ಓಡಿ ಬಂದಳು.

* * * *

ಮತ್ತೊಮ್ಮೆ ಸೀಝುನ್ ಟಿಕೀಟಿನ ಸಮಯ. ಗೆಳೆಯರು ಹದಿನೈದು ದಿನದ ಟ್ರಿಪ್ ಹೋಗುವದೆಂದು ನಿಶ್ಚಯಿಸಿದರು. ನನ್ನನ್ನೂ ಕರೆದು— 'ನೀನೇನು ಬಂದೀ ? ನಿನ್ನ ರಾಣಿಸಾಹೇಬ ಒಪ್ಪಬೇಕಲ್ಲ ?' ಎಂದು ಅಣಕ ಮಾಡಿದರು. ಹಂಪಿ, ತಿರುಪತಿ, ರಾಮೇಶ್ವರ, ಮದ್ರಾಸ್-ಬೆಂಗಳೂರು-ಮೈಸೂರು ಪ್ರವಾಸ ಆಕರ್ಷಕವಾಗಿತ್ತು. ಗೆಳೆಯರ ಅಣಕವನ್ನು ಗಮನಿಸಿ ಹೊರಡಲನುವಾದೆ. ತಿರುಪತಿ–ರಾಮೇಶ್ವರ ಎಂದೊಡನೆ ನಮ್ಮ ತಾಯಿ ತಾನೂ ಬರುತ್ತೇನೆಂದಳು. 'ಗೆಳೆಯರೊಡನೆ ಹೋಗುತ್ತೇನೆ—ಮತ್ತೊಮ್ಮೆ ಎಲ್ಲರೂ ಹೋಗೋಣ' ಎಂದು ಹೇಳಿದೆ. ತಾಯಿ ಗೊಣಗಿಕೊಂಡಳು. ಇವಳೂ ಸಿಡಿದ ಪಟಾಕಿಯಾದಳು. ರಮಿಸುವದೂ ನನ್ನ ಬಿಗುಮಾನಕ್ಕೆ ಹಿಡಿಸಲಿಲ್ಲ. ಬಿಟ್ಟು ಹೊರಟೇ ಬಿಟ್ಟೆ.

ನಾವೆಲ್ಲ ಸಂಚಾರ ಮುಗಿಸಿ ಮೈಸೂರಿಗೆ ಕೊನೆಯದಾಗಿ ಬಂದೆವು. ಬೃಂದಾವನದಲ್ಲಿ ಅಲೆಯುತ್ತಿದ್ದೆವು. ಮನೆಬಿಟ್ಟು ಹದಿಮೂರು ದಿನವಾಗಿತ್ತು. ಇವಳ ನೆನಪು ಮನದಲ್ಲಿ ಊರಿತ್ತು. ಆ ಕಾರಂಜಿಯ ಓಕುಳಿಯನ್ನು ನೋಡಿ, ಅಲ್ಲಿ ಬಂದ ಯುಗಲಗಳನ್ನು ಕಂಡು ನಮ್ಮ ಗಂಡು ಹಿಂಡೆಲ್ಲ ಹುಚ್ಚಾಗಿತ್ತು.

ಅಂಥ ಆಕರ್ಷಕವಾದ ಆ ಬೃಂದಾವನ! ಆ ಸಂಜೆ! ಆ ಬೆಳುದಿಂಗಳು! ಆ ಬಣ್ಣದ ಕಾರಂಜಿ! ನನ್ನ ಮನಸ್ಸು ಮುದುಡಿಕೊಂಡಿತ್ತು ಇವಳಿಲ್ಲದೆ ಇಲ್ಲಿಗೇಕೆ ಬಂದೆ–ಎಂದು ಹಲವು ಬಾರಿ ಅಂದುಕೊಳ್ಳುತ್ತಾ ಒಂದು ಹುಲ್ಲಿನ ಶತರಂಜಿಯ ಮೇಲೆ ಕುಳಿತಿದ್ದೆ. ಗೆಳೆಯರೆಲ್ಲ ಚೆದುರಿಕೊಂಡು ಒಬ್ಬೊಬ್ಬರೇ

ಆಗಿ ಅಲೆಯುತ್ತಿದ್ದರು. ಹದಿಮೂರು ದಿನವೆಲ್ಲ ಹಗಲಿರಳೆನ್ನದೆ ಕೂಡಿದ್ದವರು ಅಲ್ಲಿ ಒಬ್ಬರಿಗೊಬ್ಬರು ಬೇಸತ್ತಂತೆ ತಪ್ಪಿಸಿಕೊಂಡು ತಿರುಗಾಡುತ್ತಿದ್ದರು. ಅದೇ ನಮ್ಮ ಪ್ರವಾಸದ ಕೊನೆಯ ಘಟ್ಟ.

ನಾನು ಕಣ್ಣು ಮುಚ್ಚಿಕೊಂಡು ಬೃಂದಾವನದಲ್ಲಿ ಇವಳನ್ನು ಕರೆ ತಂದು ಕೂಡಿಸಿ ನೋಡುತ್ತಿದ್ದೆ. ಒಮ್ಮೆ ಕಣ್ಣು ತೆರೆದೆ. ಇವಳೇ–ನನ್ನವಳೇ ಎದುರಿಗಿದ್ದಾಳೆ. ಜತೆಯಲ್ಲಿ ಅವರ ತಾಯಿ. ಛೇ. ಇವರೇಕೆ ಇಲ್ಲಿ? ಇಲ್ಲಿ ಹೇಗೆ ಬಂದಾರು? ಇರಲಾರದು.

ಇವಳ ತಾಯಿ ಹೇಳಿದರು: "ನೋಡೇ–ಅವರೇ ಅಲ್ಲವೇ?"

ಇವಳು ಬೆದರಿದಂತೆ ನಿಂತಿದ್ದಾಳೆ. ನನಗೂ ಹೇಗೋ ಆಯಿತು. ಇವಳ ತಾಯಿ ಇಲ್ಲದೆ ಇವಳೊಬ್ಬಳೇ ಎದುರು ಬಂದಿದ್ದರೆ ನಾನು ನಂಬುತ್ತಿದ್ದೆನೋ—ಎಂದೆನಿಸಿತು. ಅಂಥವಳೇ ಇನ್ನೊಬ್ಬಳು ಇದ್ದರೆ!............... ನಮ್ಮ ಅತ್ತೆಯೇ ಮಾತಾಡಿಸಿದರು: "ಇಲ್ಲಿಗೆ ಯಾವಾಗ ಬಂದಿರಿ?" ಎಂದು.

"ಹಾ! ನೀವು ಇಬ್ಬರೇ ಇಲ್ಲಿ ಯಾವಾಗ—" ಎಂದು ಮುರಿದು ಮುರಿದು ಮಾತಾಡಿದೆ.

ಇವಳು ಬದಿಗೆ ಬಂದು ಕುಳಿತಳು. ಇಬ್ಬರಿಗೂ ಸಂಶಯ ನಿವಾರಣೆ ಯಾಗಿತ್ತು. ಅತ್ತೆ ಸ್ವಲ್ಪ ದೂರ ಸರಿದಿದ್ದರು. ಗೆಳೆಯರು ಬಂದಾರೆಂಬುದೊಂದೇ ಭಯವಿತ್ತು.

ಇವಳಿಗೆ ಮಾತ್ರ ಯಾವ ಭಯವೂ ಇದ್ದಂತಿಲ್ಲ. ತೌರಿನಿಂದ ಬಂದಿದ್ದಾಳಂತೆ! ತೀರ ನನ್ನ ಸನಿಯಕ್ಕೊರಗಿ ಕುಳಿತು ಹೇಳಿದಳು—

"ನೀವು ಪ್ರವಾಸ ಹೊರಟ ಮರುದಿನ ನನ್ನ ಸಣ್ಣ ಅಣ್ಣ ವಸಂತ ಬಂದ. ಅವನಿಗೆ ಒಂದು ಹುಡಿಗೆಯನ್ನು ನೋಡಬೇಕಾಗಿತ್ತು. ಜತೆಗೆ ನಾನೂ ಇರಬೇಕೆಂದು ಅವನು ಬಯಸಿದ. ಅತ್ತೆಯನ್ನು ಅವನೇ ಕೇಳಿಕೊಂಡ. ಅವನ ಮೇಲೆ ಅತ್ತೆಗೆ ಎಷ್ಟು ಪ್ರೀತಿ ಎನ್ನುತ್ತೀರಿ—ಅವನ ಗಲ್ಲ ಸವರಿ ಆಯ್ತು—ಕರಕೊಂಡು ಹೋಗು. ಹುಡುಗಿ ಚೆಂದ ಕಂಡರೆ ಮದುವೆ ಬೇಗ ಮುಗಿಸಿ ಬಿಡಿರಿ—" ಎಂದರು.

"ಮೈಸೂರಿಗೆ ಕನ್ಯಾ ನೋಡಲು ಬಂದಿದ್ದೀರೇನು? ನನಗೆ ಯಾಕೆ ತಿಳಿಸಲಿಲ್ಲ?" ನಾನಂದೆ.

“ ಇಲ್ಲಿ ಕೇಳಿ—ಅವಸರ ಮಾಡಬೇಡಿ. ಹುಡುಗಿ ಹಾವೇರಿಯದು. ಮದುವೆಯೂ ಆಯಿತು. ”

“ ಹಾ ! ನನಗೆ ತಿಳಿಸಲೇ ಇಲ್ಲ. ಏನಷ್ಟು ಅವಸರ ? ”

“ ನೋಡಿ, ಎಲ್ಲಿಗೆಂದು ನಿಮಗೆ ತಿಳಿಸುವದು ? ಹುಡುಗಿ ಚೆಂದ ಇದ್ದಾಳೆ. ತಮ್ಮ ಒಪ್ಪಿದ. ನಾನೂ ಒಪ್ಪಿದ್ದೆ. ಮೊನ್ನೆ ಬಿದಿಗಿಯೇ ಕಡೆಯ ಮುಹೂರ್ತವಿತ್ತು. ತಿರುಪತಿಯಲ್ಲಿ ಮದುವೆಯಾಯಿತು. ”

“ ಹೂ--ತಿರುಪತಿಯೂ ಆಯಿತೇ ? ನಾವು ಮೊನ್ನೆಯೇ ತಿರುಪತಿ ಬಿಟ್ಟೆವು. ”

“ ನಾವು ನಿನ್ನೆ. ”

“ ಒಳ್ಳೆ ಕಣ್ಣುಮುಚ್ಚಾಲೆ ಆಡುತ್ತಿದ್ದೀಯಲ್ಲ ? ”

“ ನಿಜವಾಗಿಯೂ. ವಸಂತ—ಅವನ ಹೆಂಡತಿ ಇಲ್ಲೇ ಎಲ್ಲಿಯೋ ತಿರುಗಾಡುತ್ತಿದ್ದಾರೆ. ಅವ್ವ—ನಾನು ಅವರ ಗೊಡವೆ ಬಿಟ್ಟು ಇತ್ತ ಬಂದೆವು. ಅವರ ಹುಚ್ಚು ನೋಡಿ ನನಗೆ ಹೇಗಾಯಿತೆನ್ನುತ್ತೀರಿ ? ”

“ ಹೇಗಾಯಿತು ? ”

“ ನೀವು ದೇವರಂತೆ ಇಲ್ಲಿಯೇ ಸಿಕ್ಕಿರಲ್ಲ ? ಸಾಕು. ” ಇವಳು ಇನ್ನೂ ಒತ್ತಿಗೆ ಸರಿದಳು.

ನನ್ನ ಗೆಳೆಯನೊಬ್ಬ ನನ್ನ ಹೆಸರು ಹಿಡಿದು ಕೂಗುತ್ತ ಬಂದ. ನಾನು ಇವಳ ಗುಲಾಬಿ ಅಚ್ಚಿನ ಪತ್ತಲದ ಸೆರಗು ಎಳೆದು ನನ್ನ ಮುಖ ಮುಚ್ಚಿಕೊಂಡೆ. ಬೆಳುದಿಂಗಳ ಮಬ್ಬು ಬೆಳಕಿನಲ್ಲಿ ಅವನು ಗುರುತಿಸದೆ ಮುಂದೆ ಹೋದ. ಆಗ ಇವಳೂ ಬಾಯಿ ಹೊಲಿದುಕೊಂಡು ಕೂತಳು.

ಇವಳು ಅಂದು ಅವಳ ಹಿರಿ ಅಣ್ಣನ ಹೆಸರಿನಿಂದ ನಾನೇ ತಂದುಕೊಟ್ಟ ಹಗುರಾದ ಪತ್ತಲ ಉಟ್ಟಿದ್ದಳು. ಅವ್ವ ಹೇಳುವಂತೆ ತುಂಬಿದ ಅವಳ ಮೈ ಆ ಮಬ್ಬು ಬೆಳುದಿಂಗಳಿನಲ್ಲೂ ಎದ್ದು ಕಾಣುತ್ತಿತ್ತು.

* * * *

ನನ್ನ ಗೆಳೆಯರು ಒಬ್ಬೊಬ್ಬರಾಗಿ—ಇಬ್ಬಿಬ್ಬರಾಗಿ ನನ್ನನ್ನು ಕೂಗಿಕೊಂಡು ಅಲೆಯುತ್ತಿದ್ದವರು ಎಲ್ಲರೂ ಹೊರಟು ಹೋದರೇನೋ !

ಮತ್ತೆ ಇವಳ ಬಾಯಿಗೆ ಬೀಗವಿಲ್ಲ. ಒಂದೇ ಸಮ ಹರಟುತ್ತಿದ್ದಾಳೆ.

" ವಸಂತನ ಅತ್ತೆ-ಮಾವ ಇನ್ನೂರು ರೂಪಾಯಿ ಅವನ ಕೈಯಲ್ಲಿ ಹಾಕಿ ಹನಿಮೂನ್‌ಗೆ ಕಳಿಸಿದ್ದಾರೆ."

" ನೀವೇಕೆ ಬಂದಿರಿ ?"

" ನಮಗೂ ಸೀಝನ್ ಟಿಕೇಟುಗಳಿವೆ. ನಿಮಗಷ್ಟೆ ಏನು ?"

" ನನ್ನದು ನಾಳೆ ಮುಗಿಯುತ್ತದೆ. ಇಂದು ಹೊರಡಬೇಕು ನಾನು "

" ಹೊರಡಿ " ಎಂದಳು. ಎಷ್ಟು ಧಾರ್ಷ್ಟ್ಯ !

" ನೀನು ?"

" ನಮಗಿನ್ನೂ ಎಂಟು ದಿನ ಸುತ್ತಾಟವಿದೆ. ಅತ್ತೆಯಿಂದ ಮಂಜೂರಾದ ರಜ ಇನ್ನೂ ಎರಡು ವಾರಗಳವರೆಗಿದೆ."

" ಅಂದರೆ !"

" 'ಒಂದು ತಿಂಗಳು ಬರಬೇಡ—ಬೇಕಾದಲ್ಲಿ ಹೋಗು' ಎಂದು ಅಪ್ಪಣೆಯಾಗಿದೆ."

" ನನ್ನ ಗತಿ ?"

" ನೀವೂ ಯಾಕೆ ನಮ್ಮ ಕೂಡ ಇನ್ನೊಮ್ಮೆ ಬರಬಾರದು ?"

" ನನಗೆ ರಜಾ ಇಲ್ಲ."

" ಬೆಳಸಲಾರಿರಾ ?"

" ಕೆಲಸಕ್ಕೇ ಕೈ ಮುಗಿ ಎನ್ನುತ್ತೀಯಾ ?"

" ನನ್ನನ್ನು ಒಂದು ವಾರ ಸುತ್ತಾಟಕ್ಕೆ ಬಿಡಲಾರಿರಾ ? ಅಂದು ಯಾಕೆ ನನ್ನನ್ನು ಬಿಟ್ಟು ಬಂದಿರಿ ?"

" ಗೆಳೆಯರ ಸಂಗಡ ನೀನೊಬ್ಬಳೇ ಹೇಗೆ ಬರುತ್ತಿದ್ದಿ ?"

"ಈಗ ನನಗೆ ಅಡ್ಡಿ ಮಾಡಬೇಡಿರಿ."

ನಮ್ಮ ಅತ್ತೆ, ಅವರ ಜತೆ ಇವಳ ಅಣ್ಣ ವಸಂತ, ಒಬ್ಬ ಹೊಸ ಹುಡುಗಿ ಬಂದರು. ನಾವು ಸ್ವಲ್ಪ ಬಿಟ್ಟು ಬಿಟ್ಟು ಕುಳಿತೆವು.

ಹೊಸ ದಂಪತಿಗಳು ನನಗೆ ನಮಿಸಿದರು. ನನ್ನ ವಿರಹದುರಿಯಲ್ಲೇ ಹರಸಿದೆ. ಹಣ್ಣುಹಂಪಲ ತಂದಿದ್ದರು. ತಿಂದಾಯಿತು.

ಮೈಸೂರಿಗೆ ತಿರುಗಿ ಹೋಗುವ ಗಾಡಿ ಹೋಯಿತಲ್ಲಾ–ಎಂದೆ. 'ನಮ್ಮ ಟ್ಯಾಕ್ಸಿ ಇದೆ' ಎಂದು ವಸಂತ ಆಕಡೆ .ಕೈಮಾಡಿ ಹೇಳಿದ.

ನಾನು ಇವಳೊಡನೆ ಅಂದು ರಾತ್ರಿ ಅಲ್ಲೇ ಉಳಿಯಬಯಸಿದೆ. ಅವರಷ್ಟೇ ಹೋದರು.

ಮಾರುದಿನ ಇವಳನ್ನು ಕರೆದೊಯ್ದು ಅವರ ತಾಯಿಗೆ ಒಪ್ಪಿಸಿ ನನ್ನ ನವಕರಿಯನ್ನು ಶಪಿಸುತ್ತ ನನ್ನ ಗೆಳೆಯರ ಬಿಡಾರಕ್ಕೆ ಬಂದರೆ ಅವರೂ ಇಲ್ಲ–ನನ್ನ ಸಾಮಾನೂ ಇಲ್ಲ. ಅವರು ಮುನ್ನಾದಿನವೇ ಹೋಗಿಬಿಟ್ಟಿದ್ದಾರೆ. ಮತ್ತೆ ಇವಳನ್ನು ಹುಡುಕಿಕೊಂಡು ಹೋದೆ. ಅಂದು ಸಂಜೆಯ ರೈಲಿಗೇ ನಾನು ಹೊರಡಬೇಕು. ವಸಂತನ ಟ್ಯಾಕ್ಸಿಯಲ್ಲಿ ಮತ್ತೊಮ್ಮೆ ನಗರಪರಿಭ್ರಮಣ ವಾಯಿತು. ವಸಂತ ಖಂಡಿತ ಹೇಳುತ್ತಾನೆ: "ತಂಗಿಗೆ ರಜಾ ಇನ್ನೂ ಎರಡು ವಾರ. ಅನಂತರವೇ ಬರುವವಳು."

* * * *

ನನ್ನ ರಜಾ ಮುಗಿದಿತ್ತು. ಟಿಕೀಟಿನ ಅವಧಿ ಮುಗಿಯಬಂದಿತ್ತು. ಸಂಜೆಯ ರೈಲಿಗೆ ಒಬ್ಬನೇ ಹೊರಟು ಊರಿಗೆ ಬಂದೆ.

ಮನೆಯಲ್ಲಿ ಅವ್ವ ಸ್ವಾಗತಿಸಿ, "ನೀನಾದರೂ ಬಂದೆಯಲ್ಲ ಮಹಾರಾಯಾ. ಅವಳೂ ಹೋಗಿಬಿಟ್ಟಿದ್ದಾಳೆ. ಅಣ್ಣನ ಮದುವೆಯಂತೆ! ಆಯಿತಲ್ಲ–ಇದೇ ಕಡೆಯ ಮದುವೆ ಅವರಲ್ಲಿ. ನೀನೂ ಇದ್ದಿಲ್ಲ–ಯಾರು ಹೇಳಬೇಕವಳಿಗೆ! ಮದುವೆ ಮುಗಿಸಿದವಳೇ ಬಂದೆರಾಗುತ್ತಿದ್ದಿಲ್ಲವೇ? ಈಗಿನ ಹುಡುಗಿ

ನಾನು ಅವಳನ್ನು ಕಂಡದ್ದು ಹೇಳಲೇ, ಬೇಡವೇ?
ಮನೆಯಲ್ಲಿ ಮಾತ್ರ ಭಣ–ಭಣ!
ನಾಳೆ ಮಿತ್ರರಿಗೆ ಯಾವ ಬುರಡೆ ಬಿಡಬೇಕು?

# ಇವರ' ಹುಚ್ಚು

ಇವರು ಟ್ರಿಪ್ ಹೋಗುವದೆಂದು ನಿರ್ಧರಿಸಿದ್ದಾರೆ. ಹದಿನೈದು ದಿನಗಳ ಪ್ರಯಾಣವಂತೆ

ರೇಲ್ವೆಯವರು ರಿಯಾಯತಿಯ ಆಸೆ ಹಚ್ಚಿ ಇಂಥವರಿಗೆ ಯಾಕೆ ಕೆಲಸ ವಿಲ್ಲದೆ ಅಲೆದಾಡ ಹಚ್ಚಬೇಕು?

ಮನೆಯಲ್ಲಿ ಅತ್ತೆ–ನಾನು ಇಬ್ಬರೇ ಇರಬೇಕು. ನಮಗೂ ಆಸೆಯಿಲ್ಲ ವೇನು? ಇವರು ನಮ್ಮನ್ನೂ ಯಾಕೆ ಕರೆಯಬಾರದು? ಗೆಳೆಯರಂತೆ! ದಿನಾ ಆದೇ ಗೆಳೆಯರ ಕೂಡ ಆಫೀಸು ಬಿಟ್ಟಮೇಲೆ ಮನೆಯ ಪರವೆಯಿಲ್ಲದೆ ಹರಟುವದು ಸಾಲದೇನೋ ಇವರಿಗೆ!

ಎಂಟಕ್ಕೇ ಬರುತ್ತೇನೆಂದು ಹೋಗುತ್ತಾರೆ. ಇವರ ಗಡಿಯಾರಗಳೆಲ್ಲ ಎಂಟರ ಮುಂದೆ ನಡೆಯುವದೇ ಇಲ್ಲ. ಸರಿ ರಾತ್ರಿಗೆ ಬರುವದು. ಅಡಿಗೆ ತಂಗಳಾಗುವವರೆಗೆ ನಾವು ಕಾದಿರಬೇಕು.

ನಾನು ಬರುವ ಮುನ್ನ ಮನೆಯಲ್ಲಿಯೇ ಆ ಗೆಳೆಯರನ್ನು ಕೂಡಿಸಿ ಕೊಂಡು ಇಸ್ಪೇಟು ಆಡುತ್ತಿದ್ದರಂತೆ. ಈಗ ಏನು ಮಾಡುತ್ತಾರೋ— ತಿರುಗಾಟವಂತೆ!

ನಾನು ಮಾತ್ರ ಬಾಯಿ ಹೊಲಿದುಕೊಂಡು ಕೂತಿರಬೇಕು. ಅತ್ತೆ ಯೊಡನೆ ಅದೇ ಸಂಬಂಧದವರ ಬಗ್ಗೆ ಮತ್ತೆ ಮತ್ತೆ ಮಾತಾಡಬೇಕು. ಅವರು ಹೇಳಿದಾಗ ಅದೇ ಅದೇ ದೇವರ ನಾಮ ಹಾಡಬೇಕು. ಹೊರಗೆ ಹೋದರೆ ಅದೊಂದು ರಾಮನ ಗುಡಿ. ಅಲ್ಲಾದರೆ ಅತ್ತೆಯ ಗೆಳತಿಯರು, 'ಆವಳ ಸೊಸೆ ಹಾಗೆ–ಇವಳ ಸೊಸೆ ಹೀಗೆ; ಇವಳ ಮಗಳು ಬಂದಿದ್ದಾಳೆ; ನೀನೇನವ್ವಾ ಮಹಾರಾಣಿ' ಎಂದಾಡುವ ಇವೇ ಮಾತು ಕೇಳಬೇಕು.

ಪುಸ್ತಕಗಳೊಂದಿವೆ. ಆ ನಿರ್ಜೀವ ವಸ್ತುಗಳು ಹೇಳುವ ಜೀವಂತ ಕಥೆಯ ಒಡನಾಟದಿಂದ ಒಂದಿಷ್ಟು ಕಾಲ ಸರಿಯುತ್ತದೆ. ಆದರೆ ಅದೆಲ್ಲಾ ನಿಜವೇನು? ಕಥೆ ಬರೆದಂತೆಲ್ಲಾ ನಡೆಯುವದು ಸಾಧ್ಯವೇನು? ಇರಬಹುದು– ಕಥೆ ನಡೆಯದೆ ಅವರು ಬರೆಯುತ್ತಾರಾದರೂ ಹೇಗೆ? ಇವರ ಗೆಳೆಯರಿ

ಗೆಲ್ಲಾ ಮದುವೆಯಾಗಿಲ್ಲ. ಇವರೊಬ್ಬರದು; ಇನ್ನೊಬ್ಬರದು ಮೊನ್ನೆ ಮೊನ್ನೆ ಆಗಿದೆ. ಆದರೆ ಹೆಂಡತಿ ಇನ್ನೂ ಬಂದಿಲ್ಲನಂತೆ. ಹೆಂಡತಿ ಇದ್ದರೆ ಅವರೇ ಏನು ಹೀಗೆ ದಿನ ಕಳೆವವರು? ನನ್ನಣ್ಣನವರು ಮದುವೆಯಾದ ಮೇಲೆ ಒಂದು ವಾರವೂ ತೌರಿನಲ್ಲಿರಗೊಡಲಿಲ್ಲ.

ನನಗೆ ಆ ತಾಯಿಯನ್ನು, ನನ್ನ ಅಣ್ಣಂದಿರನ್ನು ಬಿಟ್ಟು ಬರಬೇಕಾದರೆ—ಅಯ್ಯೋ ಇವರೇ ಇಲ್ಲಿ ಬಂದು ಯಾಕೆ ಇರಬಾರದು—ಎನ್ನಿಸಿಬಿಟ್ಟಿತ್ತು. ನಮ್ಮ ತಂದೆ ಇದ್ದರೆ ಹಾಗೇ ಮಾಡುತ್ತಿದ್ದನಂತೆ—ಅವ್ವ ಹೇಳುತ್ತಾಳೆ 'ಅಳಿಯನನ್ನೇ ಮನೆಯಲ್ಲಿ ನಿಲ್ಲಿಸಿಕೊಳ್ಳುವೆ. ಈ ಪುಟ್ಟಾಣಿ ಮಗಳನ್ನು ಕಳಿಸ. ವದಿಲ್ಲ' ಎನ್ನುತ್ತಿದ್ದನಂತೆ ನಮ್ಮ ತಂದೆ. ಅವನಾದರೂ ಉಳಿಯಬೇಡವೇ ನನ್ನ ಪುಣ್ಯಕ್ಕೆ!

ನನ್ನ ತಾಯಿ, ಅಣ್ಣ ಇವರನ್ನು ಕರೆಯುತ್ತಾರೆ. ನಿಲ್ಲಿಸಿಕೊಳ್ಳಬಯಸುತ್ತಾರೆ. ಇವರು ಎರಡು ದಿನವೂ ನಿಂತುದಿಲ್ಲ. ಇರಲಿ—ಬಿಡಲಿ. ನಾನು ಇಲ್ಲಿ ಬಂದಮೇಲೆ ನಡುನಡುವೆ ಒಂದೊಂದು ದಿನ ಯಾಕೆ ನನ್ನನ್ನು ಬಿಟ್ಟು ಊರಿಗೆ ಹೋಗಬೇಕು? ಕೆಲಸವಂತೆ! ಸುಳ್ಳೇ. ಅದನ್ನು ಮಾಡು, ಇದನ್ನು ಮಾಡು ಎಂದು ಹತ್ತು ಬಗೆಯ ಅಡಿಗೆ ಮಾಡಿಸಿಕೊಂಡು, ಕಟ್ಟಿಸಿಕೊಂಡು ಆ ಕೊಳ್ಳ ಈ ಕೆರೆ ಎಂದು ಮೂರು ಮೂರು ದಿನಕ್ಕೊಮ್ಮೆ ಹೋಗುತ್ತಾರೆ. ನಾನು ಮಾತ್ರ ಮನೆಯಲ್ಲಿ ಉಳಿಸಿಕೊಂಡದ್ದನ್ನು ಒಬ್ಬಳೇ ಮಿಕಿಮಿಕಿ ನೋಡುತ್ತ ಉಣ್ಣಬೇಕು.

ಇವರ ಗೆಳೆಯರು ಹೇಳುತ್ತಾರಂತೆ: ನಾನು ಇವರನ್ನು ಕಟ್ಟಿಹಾಕಿದ್ದೇನಂತೆ; ಬಿಡುವದೇ ಇಲ್ಲವಂತೆ. 'ನೀನೇನು ಬಂದೀ' ಅನ್ನುತ್ತಾರಂತೆ ಅವರಿಗೆ. ಮತ್ತೆ ಯಾಕೆ ಆಗಾಗ ನನ್ನನ್ನು ಬಿಡಿಸಿ ಕರೆದೊಯ್ಯಬೇಕವರು? ಅವರು ಹಾಗನ್ನುತ್ತಾರೆ. 'ಈ ಸಲ ಟ್ರಿಪ್ ಹೋಗಿಬಂದೆನೆಂದರೆ ಮುಂದೆ ಹಾಗನ್ನುವದಿಲ್ಲ ಅವರು. ಅದಕ್ಕೇ ಹೋಗಿಬರುತ್ತೇನೆ' ಎನ್ನುತ್ತಾರೆ ಇವರು. ಅನ್ನುವವರು ಅಂದುಕೊಳ್ಳಲಿ. ಅಂದರೆ ನನಗೆ ಅನ್ನುತ್ತಾರೆ. ನೀವು ಹೋಗುವದು ಬೇಡ. ಇಲ್ಲವೆ ನನ್ನನ್ನೂ ಅತ್ತೆಯನ್ನೂ ಕರಕೊಂಡು ಹೋಗಿ ಎಂದರೆ 'ನೀವೂ ಬರುತ್ತಿದ್ದರೆ ನಾನೇಕೆ ಹೋಗಬೇಕು' ಎನ್ನುತ್ತಾರೆ. ನನ್ನನ್ನು ಬಿಟ್ಟು ಓಡುವದಕ್ಕೆ ಈ ಯುಕ್ತಿಯೇನು? ಹಾಗಾದರೆ ನಾನು ಬೇಡವಾದರೆ ನಾಲ್ಕು

ದಿನ ತೌರಿಗೆ ಯಾಕೆ ಕಳಿಸಬಾರದು? ಅವರಿಗೆ ನಾನು ಹೀಗೆ ಎಂದೂ ಬೇಡವಾಗುವದಿಲ್ಲ.

ಚೇಷ್ಟೆ ಮಾಡಿದರೆ ನಿನಗೆ ತಿಳಿಯುವದೇ ಇಲ್ಲ ಎಂದು ರಮಿಸಬರುತ್ತಾರೆ. ಈ ರಮಿಸುವದೂ ಚೇಷ್ಟೆಯಲ್ಲವೇನೋ!

ಉಂಡಿ ಆಯಿತು. ಅವಲಕ್ಕಿ ಹಚ್ಚಿ ಡಬ್ಬಿಯಲ್ಲಿ ತುಂಬಿದೆ. ಅತ್ತೆ ಮಾಡಿಕೊಟ್ಟ ದಶಮಿ, ಕೊರೆದ ಜುಣಕಾ, ನಾನು ಕುಟ್ಟಿದ ಖೊಬ್ರಿ ಚಟ್ನಿ ಪುಡಿ ಕಟ್ಟಿದೆ. ಆ ದೇಶದಲ್ಲಿ ಮೆಂತೆದ ಹಿಟ್ಟು ಸಿಗುವದಿಲ್ಲವೆಂದು ಒಂದು ಡಬ್ಬಿಯಲ್ಲಿ ತುಂಬಿ ಕಟ್ಟ ಹೇಳಿದರು ಅತ್ತೆ. ಅದನ್ನೂ ಮಾಡಿದೆ. ಹೊಲ್ಡಾಲಿನಲ್ಲಿ ಬಟ್ಟೆ ಬರೆ ಹಾಕಿ ಕಟ್ಟಿಕೊಟ್ಟೆ. ಥರ್ಮಾಸಿನಲ್ಲಿ ಮೂರು ಕಪ್ಪು ಚಹಾ ಹಾಕಿಸಿಕೊಂಡರು. ಇವರ ಗೆಳೆಯರ ಹಿಂಡೇ ಮನೆಯ ಕಟ್ಟೆ ತುಂಬ ಸಾನಾನು ಸಹಿತ ಬಂದು ಕೂತಿದ್ದರು. ಇವರನ್ನು ದಬ್ಬಿಕೊಂಡು ಹೋದರು. ಅತ್ತೆಗೆ ಹೇಳಿಹೋದರು. ನನಗೆ ಕಳೆದ ರಾತ್ರಿಯೇ ಹೇಳಿದರು ಇವರು ಇವರ ಗೆಳೆಯನೊಬ್ಬ ಎಲ್ಲರೆಮರು 'ನಿನ್ನ ಸರಕಾರಕ್ಕೆ ಹೇಳು' ಅನ್ನುವದೇ?

ಹೇಳುವದೇನು? ನನ್ನನ್ನು ಬಿಟ್ಟು ಹೋದದ್ದಂತೂ ನಾನೇ ಕಣ್ಣಾರೆ ಕಂಡೆ. ಈ ಸಲ ಹದಿನೈದು ದಿನವಂತೆ!

ನನಗೆ ಎರಡು ಕಾದಂಬರಿ ಕೊಟ್ಟು ಹೋಗಿದ್ದಾರೆ. ನನಗೆ ಅವೇ ಗತಿ. ಅವೇನು ಎರಡು ದಿನದ ಆಹಾರ.

ಮನೆ ಭಣಗುಡುತ್ತಿದೆ. ನಾನು, ಅತ್ತೆ; ಅತ್ತೆ, ನಾನು! ಇವರು ಮನೆಯಲ್ಲಿಲ್ಲವಾದರೆ, ಬರುತ್ತಾರೆಂದು ಕಾಯುವದೇ ಒಂದು ಕೆಲಸವಾದಾಗ ಮನಸ್ಸು ಅವರೊಡನೆಯೇ ಇರುತ್ತದೆ.

ಇನ್ನು ಹದಿನೈದು ದಿನ ಇವರ ಹಾದಿಯಿಲ್ಲ.

ಅತ್ತೆ ರಾಮದೇವರ ಗುಡಿಗೆ ಕರೆದರು. ನಾನು ಯಾವ ಮುಖದಿಂದ ಹೋಗಲಿ? ಅಲ್ಲಿಯ ಮುದುಕೆಯರೂ ಗೇಲಿ ಮಾಡುವವರೇ. ಆ ರಾಮದೇವರು ವನವಾಸಕ್ಕೂ ಸೀತೆಯನ್ನು ಬಿಟ್ಟು ಹೋಗಲಿಲ್ಲ.

ಸೀತೆಯಂತೆ ನಾನೂ ಬೆನ್ನುಹತ್ತಿದ್ದರೆ!

ನನ್ನ ಅಣ್ಣ ಬಂದಿದ್ದಾನೆ. ಅವನು ಒಂದು ಹುಡುಗಿಯನ್ನು ನೋಡಬೇಕಂತೆ. ಅಂತೂ ಹಾದಿಗೆ ಬಂದಿದ್ದಾನೆ. ಎರಡು ವರುಷದ ಹಿಂದೆ ನೀನೇಕೆ ಮದುವೆಯಾದೆ ಎಂದು ಕೇಳಿದ್ದ. ನಾನು ಈಗ ಕೇಳಲೇನು ? ಬೇಡ ಅಷ್ಟಕ್ಕೆ ಸೆಟಗೊಂಡಾನು. ಅವ್ವ ಹೇಳಿದ್ದಳು : ನೀನು ಹೆಣ್ಣು ಹಡೆದು ಅವನಿಗೆ ಕೊಡಬೇಕು—ಆಗ ಅವನು ಮದುವೆಯಾಗುತ್ತಾನೆ ಎಂದು. ಎಂಥ ಹುಚ್ಚು ಈ ಹಳೆಯ ಜನರದು ? ನಾನು ಹಡೆದು, ನನ್ನ ಮಗಳು ಪ್ರಾಯಕ್ಕೆ ಬರುವಾಗ ವಸಂತ ಮುದುಕನಾಗಿರುತ್ತಾನೆ. ನಮಗೆ ಮಕ್ಕಳೇ ಬೇಡ—ಎಂದು ಇವರನ್ನುತ್ತಾರೆ; ಅತ್ತೆಯವರು ದೇವರಿಗೆ ಹರಕೆ ಹೊತ್ತಿದ್ದಾರೆ. ಮಕ್ಕಳಿರಬೇಕು. ಇದ್ದರೆ ನನಗಿಷ್ಟು ಬೇಸರವಿತ್ತೆ ? ನನ್ನ ಗೆಳತಿ ಮದುವೆಯಾದ ಮರುವರ್ಷವೇ ಗಂಡು ಹಡೆದಳು. ಈಗವಳಿಗೆ ಮುತ್ತಿನಂಥ ಮೂರು ಮಕ್ಕಳು. ಗಂಡ ಊರಿಗೆ ಹೋದರೆ ಅವಳು ನನ್ನಂತೆ ಯಾಕೆ ಬೇಸರಗೊಂಡಾಳು ?

ಮಕ್ಕಳಾದರೆ ನಾನು ಮುದುಕಿಯಾಗುತ್ತೇನೆಂದು ಇವರಿಗೆ ಭಯ. ದಿನ ಕಳೆದಂತೆ ನಾನು ಹೀಗೇ ಇದ್ದೇನೇನು ? ಇವರ ದೇಹ-ಪ್ರಕೃತಿ ಒಳ್ಳೇದು. ತಲೆಯೊಂದು ಬೆಳ್ಳಗಾಗುತ್ತಿದೆ. ಟೊಪ್ಪಿಗೆ ಹಾಕಿಕೊಂಡರೆ ಇನ್ನೂ 'ವರ' ದಂತೇ ಕಾಣುತ್ತಾರೆ. ಇವರ ತಲೆಯ ಬಿಳಿ ಕೂದಲು ಮೊನ್ನೆ ನನ್ನ ತಲೆಗೂ ಒಂದು ಅಂಟಿಕೊಂಡಿತ್ತು. ನನಗೆ ಹೆದರಿಕೆಯಾಯ್ತು. ಕನಸಿನಲ್ಲಿ ನನ್ನ ತಲೆ ಹಂಜೀ ಬುಟ್ಟಿಯಾಗಿತ್ತು.

ಈಗಿನವರ ಕೂದಲು ಹೀಗೇ. ಆದರೆ ಇವರ ಅಕ್ಕ ಆರು ಹಡೆದಿದ್ದಾರೆ. ತಲೆಯಲ್ಲಿ ಒಂದೂ ಬಿಳಿಕೂದಲಿಲ್ಲ.

ವಸಂತ ಅತ್ತೆಯನ್ನು ಒಪ್ಪಿಸಿದ. ಹುಡುಗಿಯ ಫೋಟೋ ತಂದಿದ್ದಾನೆ. ಅತ್ತೆ ನೋಡಿ 'ಇವಳನ್ನೇ ಮದುವೆಯಾಗು. ಗೌರಿಯಾಗಿದ್ದಾಳೆ ಹುಡುಗಿ' ಎಂದರು. ಇವರಿದ್ದರೇ ನಾನು ತೌರಿಗೆ ಹೋಗುವದು ಕಠಿಣ. ಅತ್ತೆ ಇವರನ್ನು ಕೇಳು—ಎಂದರೆ, ಇವರು ಅವರನ್ನು ಕೇಳು ಎಂದು ಸುಮ್ಮನೇ ಮಿಜಿ ಮಿಜಿ ಮಾಡಿ ಕಳಿಸುವದೇ ಇಲ್ಲ. ಅತ್ತೆ ತಾವೊಬ್ಬರೇ ಆದರೂ ನನಗೆ 'ಖುಶಾಲ್ ಹೋಗಿಬಾ'ಎಂದು ಹೇಳಿ, 'ಅವ ಬಂದರೆ ಬರಲಿ, ಬೇಸತ್ತೀ, ಒಂದು ತಿಂಗಳು ಹೋಗಿ ಬಾ. ಮದುವೆ ಗೊತ್ತಾದರೆ ಮುಗಿಸಿಕೊಂಡೇ ಬಾ— ಎಂದರು. 'ನೀವೊಬ್ಬರೇ ಆಗುತ್ತೀರಿ,' ಎಂದು ನಾನು ಉಪಚಾರಕ್ಕೆ ಅಂದೆ.

'ಅವ ಬರುತ್ತಾನಲ್ಲ, ನಾನು ಕಳಿಸಿದೆನೆಂದು ನನ್ನನ್ನಷ್ಟು ಬೈಯುತ್ತಾನೆ. ತಾನು ಕಳಿಸಿದರೆ ಅಡ್ಡಿ ಇಲ್ಲವೇನೋ! ಈ ಸಲ ನಾನು ಕಳಿಸುತ್ತೇನೆ. ಹೋಗಿ ಬಾ' ಎಂದರು. ಇವರದೇ ಹೆದರಿಕೆ. ಅತ್ತೆಯ ಮುಂದೆ ಅನ್ನುವಂತಿಲ್ಲ. ಇದೊಂದು ಸಾರಿ ಹೋಗಿ ಇದ್ದು ಬರುತ್ತೇನೆ. ಆದದ್ದಾಗಲಿ!

* * * *

ನನ್ನ ನಡುವಿನ ಅಣ್ಣನ ಮದುವೆಗೂ ಇವರು ಬರಲಿಲ್ಲ. ಕಾರಣವಿಲ್ಲದೆ ತಪ್ಪಿಸಿದರು. ಈ ಚಿಕ್ಕಣ್ಣನ ಮದುವೆಯಂತೂ ಅವಸರದಲ್ಲೇ ಆಯಿತು. ಇವರು ಟ್ರಿಪ್ ಹೋಗುವ ಒಂದು ದಿನ ಮುಂಚೆಯಾದರೂ ವಸಂತ ಬಂದಿದ್ದರೆ ನಾನು ಖಂಡಿತ ಇವರನ್ನು ಬಿಡುತ್ತಿದ್ದಿಲ್ಲ. ಇವರಿಲ್ಲ–ಮದುವೆ ಮುಂದೆ ಹಾಕು–ಎಂದು ನಾನು ಹೇಗೆ ಹೇಳಬೇಕು ?

ಮದುವೆಯ ಸಮಯ ನಾನು ಕಳಸಗಿತ್ತಿಯಾಗಿರುವ ಸಂದರ್ಭದಲ್ಲಿ ಇವರಿಲ್ಲದೆ ನನ್ನ ತೌರಿನಲ್ಲಿ ಎಷ್ಟು ಸಂಕೋಚದಲ್ಲಿರಬೇಕಾಯಿತೆಂದರೆ! ನನ್ನ ಯಾವ ಅಲಂಕಾರವನ್ನೂ ನೋಡಿ ಮೆಚ್ಚುವ ಇವರಿಲ್ಲ. ಅಷ್ಟು ಜನ ಅವಸರದಲ್ಲೂ ಬಂದು ತುಂಬಿದರು; ಇವರಿಲ್ಲ. ಎಲ್ಲರೂ ಹೇಳುವವರೇ-ನಿನ್ನ ಗಂಡ ಬೇಕೆಂತಲೇ ತಪ್ಪಿಸಿ ಓಡಿ ಹೋಗಿದ್ದಾನೆ—ಎಂದು. ಅವರಿಗೇನು ಗೊತ್ತು? ಇವರು ಬಂದಿದ್ದರೆ ತಿಳಿಯುತ್ತಿತ್ತು—ಇವರ ಗುಣ ಎಂಥದೆಂದು! ಆದರೂ ಇವರಿಲ್ಲದೆ ಯಾವ ಸಂಭ್ರಮವೂ ನನಗೆ ಸಂಭ್ರಮವೇ ಅಲ್ಲ—ಇದು ಖಂಡಿತ

ವಸಂತನ ಮದುವೆಯೇ ನಮ್ಮ ಮನೆಯಲ್ಲಿ ಸದ್ಯ ಕಡೆಯ ಕಾರ್ಯ. ಇನ್ನಿವರ ಮಕ್ಕಳದು ಆದರೂ ದೂರದ ಮಾತು. ಇವರು ಇಲ್ಲದೆ–ವಸಂತ ಅವನ ಹೆಂಡತಿಯ ಕೂಡ ನಾನು ಹನಿಮೂನ್ ಸಂದರ್ಭ ಅಪ್ಪನ ಜತೆಯೆಂದು ಹೇಗೆ ಹೋಗಲಿ? ಅವರು–ಮದುಮಕ್ಕಳು ತಿರುಗಾಡಿ ಬರಲಿ ಎಂದರೆ ಅಪ್ಪ ಅವರ ಬೆನ್ನು ಹತ್ತಿದ್ದಾಳೆ. ಅವಳೊಬ್ಬಳೇ ಬಂದರೆ ತನಗೆ ತೊಂದರೆಯೆಂದು ವಸಂತ ನನ್ನನ್ನು ಕರೆಯುತ್ತಾನೆ. ಛೀ—ಹೊಸ ದಂಪತಿಗಳ ಕೂಡ ನಾವೇಕೆ ಹೋಗಬೇಕು?

ಅಪ್ಪನಿಗೇನೂ ಬುದ್ಧಿಯಿಲ್ಲ. ನಾಲ್ಕು ಊರು ಸುತ್ತುವ ಸಂದರ್ಭ–ಈ ಮಕ್ಕಳು ಸಂಸಾರದಲ್ಲಿ ಬಿದ್ದರೆಂದರೆ ತನಗೆ ಸಿಕ್ಕುವದಿಲ್ಲವಂತೆ. ಹನಿಮೂನ,

ಏನು? ನಾನು ಬಂದರೆ ಅವ್ವನನ್ನು ಮೆಚ್ಚಿಸಿದಂತಾಯಿತು; ತನ್ನ ಹುಚ್ಚಿಗೆ ರಕ್ಷೆಯಾಯಿತು—ಎಂದು ವಸಂತನ ವಿಚಾರ.

ನಾನೂ ಮದುವೆಯಾದ ಹೊಸದರಲ್ಲಿ ಇವರ ಹುಚ್ಚಿಗೆ ಈಡಾದ ಪ್ರಸಂಗ–ಅದೆಂಥ ಹಿತವಾದ ಹಿಂಸೆ! ಈಗ ಇದ್ದರೆ ಅವನನ್ನು ಮೀರಿಸುತ್ತಿದ್ದರು.

ಅವರನ್ನು ಅವರ ಪಾಡಿಗೆ ಬಿಟ್ಟು ನಾನು–ಅವ್ವ, ನಮಗೆ ಬೇಕಾದಲ್ಲಿ ನಾವು ಸುತ್ತಿದೆವು. ಗುಡಿ–ಗುಂಡಾರ, ಪೇಟೆ–ತೋಟ ಇವು ನಮ್ಮ ಪಾಲಿಗೆ. ಬಹಳವಾದರೆ ಸಿನೆಮಾ—ಅದೂ ಅವರು ಇಂಗ್ಲಿಷ್ ಚಿತ್ರಕ್ಕೆ ಹೋದರೆ ನಾವು ಮತ್ತೊಂದು ದೇಶೀ ಚಿತ್ರಕ್ಕೆ.

ಆದರೆ ಕನ್ನಂಬಾಡಿಗೆ ಎಲ್ಲರೂ ಕೂಡಿ ಹೋದೆವು. ಅಯ್ಯೋ! ಆ ತೋಟ–ಆ ನೀರ ಕುಣಿತ–ಆ ಹೂವಿನ ಬಣ್ಣಗಳು! ಅದೆಷ್ಟು ಬಗೆ! ಎಲ್ಲಾ ಹೇಳಿ ಮಾಡಿಸಿದ ವ್ಯವಸ್ಥೆ. ಅದರ ಅಚ್ಚುಕಟ್ಟು, ಅಲ್ಲಿ ತಿರುಗುತ್ತಿರುವ ಜನರ ಸ್ವಚ್ಛಂದ ಪ್ರವೃತ್ತಿ. ಆ ಮದ, ಆ ಉನ್ಮಾದ ಅದಕ್ಕೊಂದೇ ಮದ್ದು–ಇವರು ಇದ್ದರೆ! ಇವರಿಲ್ಲದೆ ನಾನು ಯಾಕೆ ಬಂದೆನಿಲ್ಲಿ? ನನಗೇನು ಗೊತ್ತು–ಇದು ಇಂಥ ಸ್ಥಳವೆಂದು? ಅವ್ವ ಕಾವೇರಿಯ ಮುಂದೆ ನಿಂತು ಕೈಮುಗಿದಳು. ನಾನೂ ಕೈಮುಗಿದೆ. ಅವಳೇನು ಬೇಡಿಕೊಂಡಳೊ! ನಾನು........ಬೇಡಿಕೊಂಡೆ. ಇದೆಂಥ ಹುಚ್ಚು ಬೇಡಿಕೆ!

ಅದೇಕೆ ಹುಚ್ಚು? ಇವರೂ ಟ್ರಿಪ್ ಹೋಗಿದ್ದಾರೆ. ಇಲ್ಲಿಗೂ ಬರುತ್ತಾರೆ. ಈಗಲೇ ಯಾಕೆ ಬಂದಿರಬಾರದು! ನಾನು ಬರುತ್ತೇನೆಂದು ಇವರಿಗೆ ತಿಳಿದಿದ್ದರೆ–ಅವರೇನು ಬಿಡುತ್ತಿದ್ದಿಲ್ಲ ಅವರ ಗೆಳೆಯರದೊಂದು ಕಾಟ.

ನನ್ನ ಬಯಕೆ ಅವ್ವನಿಗೆ ತಿಳಿದಿದೆ. ವಸಂತನಿಗೆ ತಮಾಷೆಯಾಗಿದೆ. ಮಾತೆತ್ತಿದರೆ ಯಾಕೆ ಮುಖ ಸಣ್ಣದು ಮಾಡಿರುವಿ–ಎನ್ನುತ್ತಾನೆ. 'ನಾಲ್ಕು ಇರುವೆ ತಂದುಬಿಡು. ಅವು ಕಡಿದು ಬಾತುಕೊಂಡಿತೆಂದರೆ ದೊಡ್ಡದಾಗುವುದು' ಎನ್ನಬೇಕೆನಿಸುತ್ತದೆ. ಅವನಂತೆ ನಕ್ಕು ಕೆಲೆದು ನಾನು ಮುಖ ಹರಹಿಕೊಂಡಿರಬೇಕೆಂದರೆ—ಅದು ಹೇಗೆ ಸಾಧ್ಯ!

ಅವ್ವನಿಗೆ ಅವರ ಹುಚ್ಚು ಸಂತೋಷ ನನ್ನ ಸಂಗವೂ ಅವಳಿಗೆ ಪ್ರಿಯ. ನನ್ನನ್ನು ಬಹಳ ದಿನದಿಂದ ನೋಡದಿದ್ದವಳಂತೆ ಮುಂದೆ ಕೂಡಿಸಿಕೊಂಡು ನೋಡುತ್ತಾಳೆ. ಮಕ್ಕಳಂತೆ ಮುದ್ದಿಸುತ್ತಾಳೆ. 'ಮದುವೆಯಾದ ಮಗಳಿಗೆ ತಾಯಿಯ ಪ್ರೀತಿಯೂ ಮನ ತುಂಬುವದಿಲ್ಲ, ಅಲ್ಲವೇ?' ಎಂದಳು ನಿನ್ನೆ. ಯಾಕೆ ಮದುವೆ ಮಾಡಿಕೊಡಬೇಕು? ಮುಂಚೆ ನನಗದೇ— ತಾಯಿ ಪ್ರೀತಿಯೇ ಸಾಕಾಗಿತ್ತು.

ಅಯ್ಯೋ–ಇವರೇ! ಕಾವೇರೀ ನೀನೆಂಥ ದೇವಿಯಮ್ಮಾ, ನನ್ನ ಕೋರಿಕೆ....ನಾನೆಂಥ ಹುಚ್ಚಿ? ಇಲ್ಲಿ ಒಂದು ಹೂ ಇನ್ನೊಂದರಂತಿದೆ. ದಿಟ್ಟಿಸಿದರೆ ಬೇರೆ. ಒಂದು ಕಾರಂಜಿ ಮತ್ತೊಂದರಂತಿದೆ. ಅದು ಚಿಮ್ಮುವ ನೀರಿನ ರೆಂಬೆ ಅಷ್ಟೆ; ಎತ್ತರ ಅಷ್ಟೆ. ಸುತ್ತಲ ಆವರಣ ಅದೇ. ಆದರೆ ಇದರ ನೀರಿಗೆ ಬಿಟ್ಟ ಬಣ್ಣ ಬೇರೆ. ಇದು ಅದಲ್ಲ—ಬೇರೆಯೇ. ನನ್ನ ಕಣ್ಣಿಗೆ ಮಂಕು. ಕಂಡವರನ್ನು ಇವರೆಂದು ಭ್ರಮಿಸುವ ಹುಚ್ಚು ನನಗೇಕೆ ಬಂತು?

ಇವರು ಅವರಾದರೆ ಒಬ್ಬರೇ ಹೀಗೇಕೆ ಬಿದ್ದುಕೊಂಡಿರುತ್ತಿದ್ದರು? ಇವರ ಗೆಳೆಯರ ಹಿಂಡೆಲ್ಲಿ?

ಈ ದೇಶದಲ್ಲಿ—ಇವರಂಥ ಒಂದು ಪ್ರಾಣಿ ಇದ್ದರೆ ಮೋಸವೇ. 'ರತ್ನದೀಪ' ಸಿನಿಮಾದಂಥ ಮೋಸವೇ.

ಬೇಡ ತಾಯೀ–ಈ ಹುಚ್ಚು ವಿಚಾರ ಬೇಡ.

ಅವ್ವನೂ ಭ್ರಮಿಸಿದ್ದಾಳೆ. 'ನೋಡೇ–ಅವರೇ ಅಲ್ಲವೇ?' ಎಂದಳು. 'ನೋಡಿದ್ದೇನಮ್ಮಾ–ಆದರೆ ನಮ್ಮನ್ನೇ ನೋಡುತ್ತಿರುವ ಅವರಿಗೆ ನನ್ನ ಗುರುತು ಯಾಕೆ ಹತ್ತಬಾರದು?'

ಅವರಂಥವರೊಬ್ಬರಿರಬಹುದು. 'ರತ್ನದೀಪ' ದಲ್ಲಿ ಹೀಗೇ ಇತ್ತು. ಆದರೆ ನನ್ನಂಥ ಇನ್ನೊಬ್ಬಳು ಇರಲು ಸಾಧ್ಯವೇ? ಇದ್ದರೆ ಅವಳು ಇದೇ ತರುಣನ ಮಡದಿಯಾಗಿರಲು ಸಾಧ್ಯವೇ?

ಅವ್ವ ಮಾತಾಡಿಸಿಬಿಟ್ಟಳು–ಹೌದು ಅವರು ಇವರೇ. ಹುಚ್ಚು ಮನಸ್ಸೇ, ಭ್ರಮಿತ ಕಣ್ಣುಗಳೇ—ಹಾರುವ ಎದೆಯೇ....ಹೌದು; ಅವರು ಇವರೇ.

ಅಪ್ಪ ನನ್ನನ್ನು ಮುಂದೂಡಿ ತಾನು ಬೇರೆ ಕಡೆ ಸರಿದಳು. ನನಗೆ ಮಾತೇ ಬರದು.

ಆ ನಳಿಗೆಯ ನೀರು ಎಲ್ಲಿಂದ ಬರುತ್ತಿದೆ? ಅಲ್ಲೇ ಬಿದ್ದು ಅಲ್ಲಿಂದಲೇ ಹೀರಿಕೊಂಡ ನೀರು ಚಕ್ರಗತಿಯಿಂದ ಆಟವಾಡುತ್ತಿವೆ.

ನನ್ನ ಮನದಲ್ಲೇ ಮುಳುಗಿದ ಮಾತುಗಳು ಅಲ್ಲಿಂದಲೇ ತಳಮಳಿಸಿ, ಹೊಡಮುರಿದು ಬಾಯಿಗೆ ಬರುತ್ತಿವೆ. ನಾನೆಷ್ಟು ಮೂರ್ಖಳು! ಮಾತು ಬರುವದಿಲ್ಲ ಎನ್ನುತ್ತೇನೆ—ಆದರೆ ಒಡಬಡಿಸುತ್ತಿರುವೆನೇಕೆ?

ಆಯ್ತು. ಇನ್ನಿವರು ನನ್ನನ್ನು ಬಿಡುವದೇ ಇಲ್ಲ. ಗೆಳೆಯರು ಹೆಸರು ಹಿಡಿದು ಕೂಗಿದರೂ ನನ್ನ ಸೆರಗಿನಲ್ಲಿ ಅವಿತುಕೊಂಡರು.

ನಾನು ಇನ್ನೇನು ಮಾಡಲಿ? ಮೊದಲೇ ಗೇಲಿಮಾಡುವ ವಸಂತ— ಇದನ್ನು ಕಂಡರೆ–ನನ್ನನ್ನು ಮಾತಿನಿಂದ ಚುಚ್ಚಿ ಕೊಲ್ಲುತ್ತಾನೆ. ತಾನೇನು ಬಿಟ್ಟಿದ್ದು? ನಾನೇನು ಅವನನ್ನು ಬಿಟ್ಟಿದ್ದೇನೆಂದು ಅವನು ಬಿಟ್ಟಾನು.

ಆದರೆ ಬೇಡ. ನಾವು ಬೇರೆ ಬೇರೆಯಾಗಿ ಬಂದಿದ್ದೇವೆ. ಅಕಸ್ಮಾತ್ ಭಾಗ್ಯದಂತೆ ಇಲ್ಲಿ ಕೂಡಿದೆವು. ಮತ್ತೆ ಬೇರೆ ಬೇರೆಯೇ ಊರು ಸೇರಬೇಕು. ಯಾರಿಗೂ ಇದರ ಸುಳಿವು ಬೇಡ. ಅಪ್ಪ ಬಯಲಿಗೆ ಬಿಡುವದಿಲ್ಲ. ವಸಂತ ನನ್ನು ಬೆದರಿಸಿ ನಿನ್ನ ಆಟ ನೋಡು—ಎಂದರೆ ಅವನೇನೂ ಬಾಯಿ ಬಿಡಲಾರ. ಅತ್ತೆ ಕೇಳಿದರೆ ಕಳ್ಳರು–ನನ್ನನ್ನು ವಂಚಿಸಿದರು ಎಂದಾರು. ಅಪ್ಪನನ್ನೂ ನಮ್ಮಲ್ಲಿ ಸೇರಿಸಿ 'ಮುದಿಹುಚ್ಚು'–ಎಂದಾರು.

ಛೀ–ನಾಚಿಕೆಗೇಡು. ನಾವಿಬ್ಬರೇ ಕನ್ನಂಬಾಡಿಯಲ್ಲಿ ಉಳಿಯುವದಾಗಿ ಇವರು ಹೇಳಿಬಿಟ್ಟರು. ಅವರು ಆಗಲಿ ಎಂದರು. ಇನ್ನೇನು ಮಾಡುವದು? ಅವರದೇ ಹುಚ್ಚು–ನನ್ನ ಮೇಲೆ ಮಾತಿಲ್ಲ. ಆಗಲಿ–ಅವರ ಧೈರ್ಯದಿಂದಾದರೂ ಈ ಒಂದು ದಿನ........

ಇವರು ಇಂದು ಹೋಗುವವರು ಅವರಿಗೆ ರಜಾ ಇಲ್ಲವಂತೆ–ಹೋಗಲೇ ಬೇಕಂತೆ. ನಾನು ಹೇಳಿಬಿಟ್ಟೆ. ನಾನು ಬೆನ್ನು ಹತ್ತಿದರೆ ಗೇಲಿಯಾದೀತು. ಅಪ್ಪ ಒಬ್ಬಳೇ ಆಗುತ್ತಾಳೆ. ವಸಂತನಿಗೆ ಕಾಲ್ತೊಡಕು. ನಮ್ಮ ಕೂಡ ಅವಳು ಬಂದರೆ....ಅವಳೇಕೆ ಬಂದಾಳು? ಅವಳಿನ್ನೂ ಬೇಲೂರು-ಹಳೆಬೀಡು ಎಂದು

ಕೂತಿದ್ದಾಳೆ. ನಿನ್ನನ್ನು ನಿನ್ನ ಗಂಡ ಎಂದಾದರೂ ಕರೆದುಕೊಂಡು ಬಂದಾನು. ಮುಂದೆ ನನ್ನನ್ನಾರು ಕರೆತಂದಾರಮ್ಮಾ—ಎನ್ನುತ್ತಾಳೆ.

ಏನು ಬೇಲೂರೋ-ಏನು ಹಳೆಬೀಡೋ-ನನ್ನ ಬೇಲೂರು ಹಳೆಬೀಡು ಎಲ್ಲಾ ಇವರೇ. ನನ್ನ ಈ ಚೆನ್ನಕೇಶವನನ್ನು ಎಷ್ಟು ನೋಡಲಿ? ನನ್ನದೇ ದೃಷ್ಟಿ ಇವರಿಗಾದೀತು.

* * * *

ಅವರ ಗೆಳೆಯರು ಬಿಟ್ಟು ಹೋಗಿದ್ದಾರೆ. ಅತ್ತೆಗೆ ಸುದ್ದಿ ಹತ್ತಿದರೆ....

ನಾನೂ ಹೋಗಿ ಬಿಡಲೇ? ಅವರು ಒಮ್ಮೆ ಕರೆಯಲಿ—ನಾನು ಹೊರಟೆನೇ.

ಮುಂಚೆ ನಿಷ್ಠುರ ಆಡಿದೆ—ನನ್ನನ್ನು ಕರೆಯಬೇಡಿ—ಎಂದೆ. ಇನ್ನು ಅವರು ಹೇಗೆ ಕರೆದಾರು!

ಅವರೇಕೆ ಕರೆಯಬೇಕು? ನನಗೇನಾಗಿದೆ!

ತಲೆನೋವು-ಮೈನೋವು. ಟ್ಯಾಕ್ಸಿಯಲ್ಲಿ ಚಾಮುಂಡಿ ಬೆಟ್ಟ ಏರಿ-ಇಳಿದು ಆ ದಾರಿಯಂತೆಯೇ ತಲೆತೂಗುತ್ತಿದೆ.

ಇವರು ಹೋಗುವರಂತೆ—ಹೊರಟೇ ಬಿಟ್ಟರು.

ನಾನೇನು ಮಾಡಲಿ! ಅಪ್ಪ ಒಂದು ಮಾತು ಹೇಳಬಾರದೆ? ಅವಳಿಗೆಲ್ಲಿದೆ ಆ ಬುದ್ಧಿ? ವಸಂತನಂತೂ ತನ್ನ ಬುದ್ಧಿಯನ್ನು ಎಂದೋ ಕಳಕೊಂಡಿದ್ದಾನೆ.

ನಾನು?



# ಇನ್ನೊಂದು ಮದುವೆ !

ಒಂದು ದಿನ ಗೆಳತಿ ಜಾನಕಿಯ ಮನೆಗೆ ಬಂದ ಪದ್ಮಿನಿ ಗೆಳತಿಯ ನಿಸ್ಸಹಾಯಕ ಮನೋವೃತ್ತಿಯನ್ನು ಗುರುತಿಸಿದಳು. ಶಾಲೆಯ ದಿನಗಳಲ್ಲಿ ಕಂಡುಬರದ ಯಾವುದೋ ಒಂದು ಊನವನ್ನು ಪದ್ಮಿನಿ ಅಂದು ಜಾನಕಿಯಲ್ಲಿ ನೋಡಿ ಮರುಗಿದಳು. ಅವಳ ಸಂಸಾರದ ಅನುಭವವನ್ನು ಕೇಳದಂಥ ಸಂಕೋಚ ಪದ್ಮಿನಿಯನ್ನು ಆವರಿಸಿತು. ತನ್ನೆಲ್ಲ ಸುದ್ದಿಯನ್ನೂ ತನ್ನನ್ನೂ ಬಚ್ಚಿಡುವ ಯತ್ನವನ್ನು ಜಾನಕಿಯಲ್ಲಿ ಕಂಡು ಪದ್ಮಿನಿ ಸ್ವಲ್ಪ ಕೆರಳಿದಂತಾಗಿ ನುಡಿದಳು.

" ಜಾನಕಿ, ಈ ಮನೆ ಯಾರದು ? "

" .......' ಅವರ ' ದು. "

" ' ಅವರು, ಯಾರೆ ?....ಯಾರವರು ? "

" ಏನೇ, ಹೀಗೆ ಕೇಳಿದರೆ ? "

" ........ನೀನು ಯಾರೆ ? "

" ಯಾಕೆ ? ಅವರ ಹೆಂಡತಿಯಲ್ಲವೇನು ? "

" ಜಾನಕಿ, ನೀನು ' ಜಾನಕಿ ' ಎಂಬುದನ್ನು ಮರೆತೆ. ಈ ಮನೆ ನಿನ್ನದು—ಎನ್ನುವ ಧೈರ್ಯವಿಲ್ಲ ನಿನಗೆ. ' ಅವರು ನನ್ನವರು ' ಎನ್ನಲೂ ನಿನಗೆ ಬರಲಿಲ್ಲ. ಹೀಗೆ ನೀನು ' ನಿನ್ನ ತನ ' ವನ್ನು ಕಳೆದುಕೊಂಡರೆ, ಎಲ್ಲವನ್ನೂ ಕಳೆದುಕೊಳ್ಳುತ್ತೀ. ಎಲ್ಲಾ ಹೋಗಲಿ; ನಿನಗೆ ವ್ಯಕ್ತಿನಿಷ್ಠೆಯಾದರೂ ಬೇಡವೇ ? "

" ಇರಲಿ, ಪದ್ಮಾ, ಹೆಣ್ಣಿಗೆ ಸ್ವಂತ ವ್ಯಕ್ತಿತ್ವವೆಲ್ಲಿ ಬಂತು ? ಯಾಕೆ ಬೇಕದು ? ಅದು ಒಂದಿಷ್ಟೂ ಇಲ್ಲದವಳೇ ಹೆಂಡತಿಯಾಗಿದ್ದು ಬಾಳ್ವೆ ನಡೆಸಬಲ್ಲಳು. ಹೆಣ್ಣು ತನ್ನನ್ನು ಒಬ್ಬನಿಗೆ ಕೊಟ್ಟುಕೊಳ್ಳುವುದರಲ್ಲಿಯೇ ಕೃತಾರ್ಥಳಾಗಬೇಕು. ಅಲ್ಲವೇನು ? ನೀನಿನ್ನೂ ಮದುವೆಯಾಗಿಲ್ಲ. ನಂತರ ನಿನಗೆ ನನ್ನ ಮಾತು ಅನುಭವಕ್ಕೆ ಬಂದೀತು. ನಿನ್ನ ಹಟ ಈಗ ಚೆಂದ. ಮುಂದೆ ಅದೇ ಮಾರಕವಾದೀತು ಪದ್ಮಾ. "

ಪದ್ಮಿನಿ ಒಂದು ಕ್ಷಣ ಜಾನಕಿಯ 'ಅನುಭವಾಮೃತ' ದಿಂದ ಅಪ್ರತಿಭಳಾದಳು. ಮರುಕ್ಷಣ ಬೆರಗಾದಳು, ಜಾನಕಿ ಏನಾಗಿಬಿಟ್ಟಿದ್ದಾಳಲ್ಲಾ— ಎಂದು.

ತನ್ನ ಗಲ್ಲಕ್ಕೆ ಬೆರಳೂರಿ ಕುಳಿತ ಪದ್ಮಿನಿಯನ್ನು ಕಂಡು ಜಾನಕಿ ನುಡಿದಳು :

" ಯಾಕೆ ಪದ್ಮಾ, ನನ್ನ ಮೇಲೆ ಸಿಟ್ಟೆ ? "

" ಪಾಪ, ನಿನ್ನ ಮೇಲೆ ಸಿಟ್ಟಾಗುವಷ್ಟು ಬುದ್ಧಿಹೀನೆಯೇ ನಾನು ? "

" ನೀನು ಬುದ್ಧಿವಂತೆಯಮ್ಮಾ; ಆದರೆ ಬದುಕಿಗೆ ಅದೊಂದೇ ಸಾಕೇನು ? "

" ಸಾಲದೇನು ? ನೀನಿಷ್ಟು ಬೇಗ ಗೊಡ್ಡು ವೇದಾಂತಿಯಾಗುವಿಯೆಂದು ನಾನು ನಂಬಿದ್ದಿಲ್ಲ ಜಾನಕೀ. ತನ್ನನ್ನು ಕೊಂಡುಕೊಂಡ ನೀತಿ, ವೇದಾಂತಗಳಿಂದಲೇ ಹೆಣ್ಣು ಪರಾಧೀನೆಯಾಗಿದ್ದಾಳೆ. ನಾವು ಬರೀ ಆಟದ ಗೊಂಬೆಗಳಾದರೆ–ಆಳಿಸಿಕೊಂಡರೆ ಸಾಕೇನು ? ನಾನು ನನ್ನ ಜೀವವಿರುವವರೆಗೆ ಇನ್ನೊಬ್ಬನ ಸೊತ್ತಾಗಲಾರೆ ನೋಡು ಜಾನಕೀ. "

" ಅನ್ಯರು ನಿನ್ನ ಸೊತ್ತಾಗಬೇಕೆಂದು ನಿನ್ನ ಬಯಕೆಯೇನು ಹಾಗಾದರೆ ? "

" ಅನ್ಯರು ಹಾಗೆ ಬಯಸಿದರೆ ಅದು ನನ್ನ ಬಯಕೆಯಲ್ಲ. ನನ್ನಿಂದ ಒಬ್ಬನಾದರೂ ಆಳಿಸಿಕೊಳ್ಳಲು ಬಯಸಿಬಂದರೆ.... ! "

" ಒಬ್ಬ ಬಂದರೆ ! "

" ಜಾನಕಿ, ಒಬ್ಬನಲ್ಲ; ಹತ್ತು ಜನ ಬಂದರೂ ಆಳುತ್ತೇನೆ. ಆದರೆ ನಿನ್ನಂತೆ, ಹತ್ತು ಜನರನ್ನು ಆಳುವ ಒಬ್ಬನ ದಶಾಂಶವಾಗಲಾರೆ ನಾನು ! "

ಪದ್ಮಿನಿಯ ನುಡಿಯಲ್ಲಿ ಕ್ರೋಧವಿತ್ತು; ಕಾಠಿಣ್ಯವಿತ್ತು. ಅವಳು ಎದ್ದು ಕಾಲಪ್ಪಳಿಸುತ್ತ ಹೊರಟಾಗ ರಾಘವೇಂದ್ರ ಹೊರಗಿನಿಂದ ಬಂದ. ಜಾನಕಿ ಪದ್ಮಿನಿಯನ್ನು ಕರೆದು ನಿಲ್ಲಿಸಿಕೊಂಡಳು ಗಂಡನಿಗೆ ಅವಳು ತನ್ನ ಗೆಳತಿ ಎಂದು ಪರಿಚಯ ಹೇಳಿದಳು. ಪದ್ಮಿನಿ ಸಾವರಿಸಿಕೊಂಡು, ಮುಖದಲ್ಲಿ ಮೆಲುನಗೆ ತಂದು ನುಡಿದಳು :

"ನನ್ನ ಗೆಳತಿಯು ಒಡೆಯನನ್ನು ಕಂಡು ತುಂಬ ಸಂತೋಷ ವಾಯಿತು"

"ಒಡೆಯ........!"

"ಹೌದು; ಜಾನಕಿಗೆ ಹಾಗೆಂದರೇ ಸಂತೋಷ."

"ಅವಳಿಗೆ ನಾನು ಒಡತಿಯೆಂದರೆ?"

"ಅವಳಿಗೆ ತುಂಬ ದುಃಖವಾಗುವದು."

ಜಾನಕಿ ನುಡಿದಳು: "ಒಡೆತನ ಒಬ್ಬರದೇ ಆಗಿರಬೇಕಷ್ಟೆ!"

"ಹೌದು; ಯಾರು ಅಲ್ಲವೆಂದರು? ನಿನ್ನ ಒಡೆತನ ನನ್ನ ಮೇಲೆ; ಅದು ಒಬ್ಬಳದೇ. ನನ್ನ ಒಡೆತನ ನಿನ್ನ ಮೇಲೆ; ಅದೂ ಒಬ್ಬನದೇ."

ಪದ್ಮಿನಿ ನುಡಿದಳು: "ನಿಮ್ಮ ಗಿಳಿಪಾಠ ಕೇಳಿ ಸಂತೋಷವಾಯಿತು ನಾನಿನ್ನು ಬರುತ್ತೇನೆ. ನೀವಿಬ್ಬರೂ ಒಡೆತನ ಮರೆತು ನೀವೇ ನೀವಾದಾಗ ನನ್ನ ನೆನಪಾದರೆ ಆಗ ನನ್ನಲ್ಲಿ ನಿಮಗೆ ಸ್ವಾಗತವಿದೆ. ಆದರೆ ಒಂದು ಮಾತು: ಅರ್ಪಣೆ—ಎಂದು ತನ್ನ ತನ್ನನ್ನು ಒಬ್ಬೊಬ್ಬರಿಗೇ ಆಗಲಿ, ಮಾರಿಕೊಂಡವರಿಗೆ ನನ್ನಲ್ಲಿ ಪ್ರವೇಶವಿಲ್ಲ. ನಾನಿನ್ನು ಬರಲೇ?"

ಜಾನಕಿ ಎದ್ದು ಅವಳ ಹತ್ತಿರ ಬಂದು, "ಹೋಗಿ ಬಾ ಪದ್ಮಾ, ನಿನಗೆ ಮಾತ್ರ ಇಲ್ಲಿ ಸದಾ ಸ್ವಾಗತವಿದೆ" ಎಂದು ಹೇಳಿ ಬೀಳ್ಕೊಟ್ಟಳು.

ಅವಳು ಹೊರಟುಹೋದ ಮೇಲೆ ರಾಘವೇಂದ್ರ ಅವಳ ಸಿಡಿನುಡಿಗಳನ್ನು ನೆನಸಿಕೊಂಡು ಜಾನಕಿಯ ಹತ್ತಿರ ಕೇಳಿದ:

"ಅವಳು ಮಾತಾಡಿದ್ದೇನು? ನೀವೇನು ಜಗಳ ಮಾಡಿಕೊಂಡಿರಾ?"

"ಇಲ್ಲ. ಅವಳಿಗೆ ಮದುವೆಯ ವಯಸ್ಸು ದಾಟಿದೆ. ಉಳಿದ ಹೆಣ್ಣುಗಳೂ ಹೀಗೇ ಚಿಂತಿಸುತ್ತಾರೆ; ಆದರೆ ಆಡುತ್ತಿರುವದಿಲ್ಲ. ಪದ್ಮಿನಿಯ ಹೊಟ್ಟೆಯಲ್ಲಿ ಮಾತು ನಿಲ್ಲುವದಿಲ್ಲ. ಆದರೂ ಅವಳು ಒಳ್ಳೆಯ ಹುಡುಗಿ!"

ಈ ಒಳ್ಳೆಯ ಹುಡುಗಿ ಪದ್ಮಿನಿಯದು ಸ್ವಚ್ಛಂದ ವೃತ್ತಿ. ಅವಳ ಸ್ವಾಭಿಮಾನ ಅತಿ ತೀವ್ರಗಾಮಿ. ಅವಳ ವಿಚಾರದಲ್ಲಿ ಗಂಡಿನ ಸಂಪರ್ಕಕ್ಕೆ ವಿಧಿ–ನಿಷೇಧಗಳಿರಲಿಕ್ಕಿಲ್ಲ. ಆದರೆ ಹೆಣ್ಣು ಗಂಡಿನ ಕೈಗೊಂಬೆಯೆಂದವಳು ಎಂದೂ ಭಾವಿಸಲಾರಳು. ಅವಳಲ್ಲಿ ಹೆಣ್ಣಿನ ಕೋಮಲತೆಯಿತ್ತು. ವಿಶಿಷ್ಟ ಅಭಿರುಚಿಯಿತ್ತು. ಅದೆಲ್ಲ ತನ್ನ ಸ್ವತ್ತೆಂಬ, ತನ್ನ ಕ್ರಿಯಾವಿಶೇಷವೆಂಬ, ತನ್ನ ಬುದ್ಧಿ

ಗವ್ಯ ನಿರ್ಮಿತಿಯೆಂಬ ನಿಷ್ಠೆಯಿತ್ತು. ಅದು ಪುರುಷನನ್ನು ಕುಣಿಸುವ ಸಾಧನ ವೆಂದವಳು ಎಂದೂ ಭಾವಿಸಲಿಲ್ಲ. ಅದು ತನ್ನ ಆತ್ಮತೃಪ್ತಿಗಾಗಿ ತಾನೇ ರೂಪಿಸಿ ಕೊಂಡದ್ದೆಂಬ ಭಾವನೆಯುವಳದು. ತನ್ನ ನಿಲುವಿನ, ತನ್ನ ಅಂಗವಿನ್ಯಾಸದ-ಆದರ ಸೂಕ್ಷ್ಮ ಪ್ರಭೇದದ, ತನ್ನ ವೇಷ-ಭೂಷಣದ ಒಪ್ಪ-ಓರಣಗಳು ಅವಳ ಅತ್ಯಂತ ವಿವೇಚನೆಯ, ವಿಚಕ್ಷಣೆಯ ಫಲವಲ್ಲದೆ, ಅದೆಲ್ಲ ದೈವಾಯತ್ತ ವಾಗಿ ಹೆಣ್ಣಿಗೆ ಬಂದಿರುವ ಸಲುವಳಿ ಎಂದವಳು ಎಂದೂ ತಿಳಿದಿಲ್ಲ. ಅಂತೇ ಪ್ರತಿಕ್ಷಣ ತನ್ನನ್ನು ಇತರರೊಡನೆ ಹೋಲಿಸಿಕೊಂಡು, ತನ್ನ ಎತ್ತರ ಬಿತ್ತರಗಳನ್ನು ಕಂಡುಕೊಂಡು, ತಂತಾನೇ ರಮಿಸುತ್ತಾಳೆ. ಗಂಡು ಅದಕ್ಕೆ ಒಲಿದರೆ ಅವಳ ಆಕ್ಷೇಪವಿಲ್ಲ; ಕುಣಿದರೆ ಅವಳ ಅಡ್ಡಿ ಇಲ್ಲ. ಆದರೆ ಅದು ಅವರವರ ಹೊಣೆ. ಅವರ ಒಲವಿಗೆ ತಾನು ಸೋಲಬೇಕೆಂದಿಲ್ಲ. ಅವರ ತಾಳಕ್ಕೆ ತಾನು ಕುಣಿಯಬೇಕೆಂದಿಲ್ಲ. ಯಾರು ತನ್ನನ್ನು ಕಂಡು, ಕಾಣುವದ ರಿಂದ ಮಾತ್ರ ರಮಿಸುತ್ತಾರೋ ರಮಿಸಲಿ. ಆದರೆ ಅವರನ್ನು ರಮಿಸುವ ಯತ್ನವನ್ನು ಮಾತ್ರ ಅವಳು ಸರ್ವಥಾ ಮಾಡಲಾರಳು. ಅಂತಹ ಗಂಡು ಗಳ ಆಸೆಯ ಅಭಿವ್ಯಕ್ತಿಯನ್ನು ಅವಳು ಮೆಚ್ಚಲಾರಳು. ಅಲ್ಲವಳು ಸ್ಥಿತ ಪ್ರಜ್ಞಳು; ಬೇಲೂರಿನ ಶಿಲಾಬಾಲಿಕೆ. ಆದರೆ ಅವಳ ಗೊಡವೆಗೆ ಯಾರು ಬಂದರೂ ಅದನ್ನು ಸಹಿಸದ ಚಂಡಿ-ಚಾಮುಂಡಿ! ಅಂಥವರನ್ನು ತನ್ನ ತೀವ್ರ ಅಸಡ್ಡೆಯಿಂದ ಚಿಮ್ಮಿ ಒಗೆಯುತ್ತಾಳೆ. ಆ ಒಗೆತ-ಒದೆತಗಳನ್ನು ಜನ ಮೆಚ್ಚಿ ಏಕೆ ಕಾಡುತ್ತಾರೆಂಬುದೇ ಅವಳ ಸಮಸ್ಯೆ.

* * * *

ಜಾನಕಿ ಪದ್ಮಿನಿಯ ಸಖ್ಯ-ಸಹಯೋಗದಲ್ಲೇ ಬೆಳೆದವಳಾದರೂ ಅವ ಳಲ್ಲಿ ತನ್ನತನ ಕುದುರುವ ಮುನ್ನವೇ ಮದುವೆಯಾಯಿತು. ನಿಷ್ಠೆಯನ್ನು ಬೆಳೆಯಿಸಿಕೊಳ್ಳಬೇಕೆಂದಾಗ, ಬೆಳೆದ ಮೈ-ಮನಗಳಿಗೆ ತಾನೊಬ್ಬನ 'ಅಧೀನೆ' ಎಂಬ ಅರಿವು ಬಂದು ಮೈಮರೆತಳು. ಅದು ಆಗ ಸುಖದ ಸೆರೆಯಾಗಿ ಕಂಡಿ ತವಳಿಗೆ. ಒಲಿದು ಕೈ ಹಿಡಿದ ಗಂಡ ನಾಲ್ಕು ದಿನ ಲಲ್ಲೆ ಮಾಡಿದಾಗ ಸ್ವರ್ಗ ಮೂರೇ ಗೇಣು ಉಳಿದಂತೆ ಭಾವಿಸಿದಳು. ತನ್ನೆಲ್ಲ ಆಸೆ-ಆಕಾಂಕ್ಷೆಗಳನ್ನು, ಬಯಕೆ-ಬೇಗುದಿಗಳನ್ನು, ದುಃಖ-ದುಮ್ಮಾನಗಳನ್ನು ತನ್ನ ಪತಿಯ ಪದತಲ ದಲ್ಲರ್ಪಿಸಿ ತನ್ನೆಲ್ಲವೂ ಅವನದೇ ಎಂದು ಸರ್ವಾರ್ಪಣ ಭಾವದಿಂದ ನಿಶ್ಚಿಂತ

ಳಾಗಿದ್ದಳು. ಹೊಸ ಬಾಳಿನ ಹೊಸಲಿನಲ್ಲಿ ಕಾಲಿಟ್ಟ ಅವಳು ಭಾರವೇ ಇಲ್ಲದ ಮನಸ್ಸಿನವಳಾಗಿ ಹಕ್ಕಿಯಂತೆ ಹಾರಾಡಿದಳು. ಅದನ್ನು ಕಂಡ ಪತಿ ಒಂದು ಮುಗುಳು ನಕ್ಕರೆ ಕೃತಾರ್ಥಳಾದಂತೆ ಅವನಿಗೆ ತನ್ನನ್ನು ಇನ್ನೂ ನೀಡಿ ಕೊಂಡಳು. ಅವನ ಆಸೆ ತನ್ನಾಸೆಯೆಂದಳು. ಅವನ ಹಸಿವು ತನ್ನದೆಂದಳು. ಅವನ ಸೇವೆಯೊಂದೇ ತನ್ನ ಕಾಯಕವೆಂದಳು ಈ ಮಬ್ಬಿನಲ್ಲಿ ಅವಳ ವ್ಯಕ್ತಿ ನಿಷ್ಠೆ ಅವಳರಿವಿಗೇ ಬರಲಿಲ್ಲ. ಅದರಿಂದ ಪತಿಯನ್ನು, ಅವನ ವ್ಯಕ್ತಿಮತ್ವ ವನ್ನು ಅರಿಯುವ ಪ್ರಶ್ನೆಯು ಅವಳನ್ನು ಕಾಡಲಿಲ್ಲ.

ಇಂಥ ವಿಧೇಯದ ಹೆಣ್ಣು ರಾಘವೇಂದ್ರನಿಗೆ ಆಗ ಬೇಕೆನಿಸಿತ್ತು; ಅಷ್ಟೇ ಸಾಕಾಗಿತ್ತು. ಇನ್ನೊಬ್ಬರ ಚಾಕರಿಯಲ್ಲಿ ವ್ಯೆಸವೆಸಿ ಜೀವಧಾರಣ ಮಾಡಿಕೊಂಡಿದ್ದ ಅವನಿಗೆ ಕೈಹಿಡಿದು ಬಂದ ಜಾನಕಿಯ ಮೇಲೆ ತನ್ನ ಸಂಪೂರ್ಣ ಪ್ರಭುತ್ವ ಚಲಾಯಿಸುವುದು, ಅದರಲ್ಲಿ ರಮಿಸುವುದು ರೂಢಿಯೇ ಆಯಿತು. ತನ್ನಾಸೆಯನ್ನು ಚಿಗುರಿಸಿಕೊಂಡು, ಬಲಿಸಿಕೊಂಡು ಅವನು ಅದ ನ್ನೆಲ್ಲ ಅವಳಲ್ಲಿ ಪಡೆದ. ತನಗರಿಯದೆ ಅವಳ ಬಂದಿಯಾದ.

ಆದರೆ ಮುಂದೆ ಆ ಕಾವು ಆರುತ್ತ ಬಂದಿತು. ವೈವಿಧ್ಯ ಇಲ್ಲದ ನಿತ್ಯ ಜೀವನಕ್ಕೆ ಮನ ಹೇಸಿತು; ಇನ್ನೇನೋ ಮನ ಬಯಸಿತು. ಯಾವುದೋ ಕೊರತೆ ಗೋಚರಿಸದೆ ಕೊರೆಯಿತು. ಅದು ಯಾವ ಕೀಟವೆಂದು ಅವನು ಅರಿಯದಾದ.

* * *

ರಾಘವೇಂದ್ರನ ಆಂತರಿಕ ಅತೃಪ್ತಿ ವ್ಯಕ್ತವಾಗಿ ಮೊದಲು ಕಂಡದ್ದು ಜಾನಕಿಗೆ. ಅದರ ಕಾರಣಗಳನ್ನೂಹಿಸುವುದೂ, ಅವಳಿಗೆ ಕಷ್ಟವಾಗಲಿಲ್ಲ. ಇಂದು ಗಂಡನ ವರಮಾನ ಹೆಚ್ಚಿದಂತೆ, ಅವನ ಅಂತಸ್ತು ಏರಿದಂತೆ, ಅನೇಕ ಚಾಕರರನ್ನು ನಿಯಮಿಸಿಕೊಳ್ಳಲು ಸಮರ್ಥನಾದಂತೆ ತನ್ನ ಸ್ವಂತ ಜೀವನ ದಲ್ಲಿಯೂ ಮಾರ್ಪಾಟು ಬಯಸುತ್ತಾನೆಂದವಳು ಚಿಂತಿಸಿದಳು.

ಜಾನಕಿಯ ಗೃಹಜೀವನದಲ್ಲಿ ಕಾಲಿರಿಸಿದ ಈ ಸಂಪತ್ತು ಅವಳು ಒಗ್ಗಿಸಿ ಕೊಂಡ ಸಾಂಸಾರಿಕ ರೀತಿ–ನೀತಿಗಳನ್ನು ಬದಲಿಸಲು ಯಾಕೆ ಕಾರಣವಾಗ ಬೇಕು? ಹಣ ತರಬಲ್ಲ ಸುಖ ಅವಳ ಲೌಕಿಕ ಜೀವನಕ್ಕೆ ಮೆರುಗನ್ನು ತಂದಿತು. ಗಂಡನ ಹುಚ್ಚು ಇದರಿಂದ ಹೆತ್ತು ಕಡೆ ಹರಿಯುವುದು ಅವಳ ಒಳ

ಜೀವನಕ್ಕೆ ಬೇಸರವನ್ನೂ ತಂದಿತು. ಈ ಸಂಪತ್ತು ಬರುವ ಮೊದಲು ಅವಳು ತನ್ನದೆಲ್ಲವನ್ನೂ ಅವನಿಗೆ ನೀಡಿದ್ದಾಳೆ. ಇಂದು ಅವನು ಬಯಸುವ ಹೊಸದು ತನ್ನಲ್ಲೇನಿದೆ? ಹಣದಿಂದ ಅದೆಲ್ಲವನ್ನು ತನ್ನಲ್ಲಿ ತುಂಬಿಕೊಂಡು ಗಂಡನಿಗೆ ನೀಡಬಲ್ಲೆನೆಂದು ಜಾನಕಿ ಅರಿಯದಾದಳು.

ಆದರೆ ರಾಘವೇಂದ್ರ ಇಂದು ಜಾನಕಿಯಲ್ಲಿ ಬಯಸಿದ್ದು ಬರೀ ವಿಧೇಯತೆಯನ್ನಲ್ಲ; ವ್ಯಕ್ತಿನಿಷ್ಠೆಯನ್ನು. ಸೇವಾಭಾವವನ್ನಲ್ಲ; ಸಮತೆಯನ್ನು, ಸ್ವಚ್ಛಂದತೆಯನ್ನು, ಧಾರ್ಷ್ಟ್ಯವನ್ನು, ಕೆಚ್ಚನ್ನು, ಸೊಕ್ಕನ್ನು,—ಈವರೆಗೆ ಜಾನಕಿ ಪಡೆದದ್ದಲ್ಲ; ನೀಡಿದ್ದಲ್ಲ; ಪಡೆಯದ, ನೀಡದ ಇನ್ನೆಲ್ಲವನ್ನು.

ಈ ಆಕಾಂಕ್ಷೆಯ ರಭಸಕ್ಕೆ ಕೊಚ್ಚಿ ತೇಲುವ ಹೆಣ್ಣಲ್ಲ ಜಾನಕಿ. ಸ್ವಾಭಾವಿಕವಾಗಿ ರೂಪುಗೊಂಡ ಅವಳ ಬಾಳಿನ ರೀತಿ--ನೀತಿಗಳು ತಮ್ಮದೇ ಆದ ಅಭಿರುಚಿಯನ್ನು, ಗಾಂಭೀರ್ಯವನ್ನು ಪಡೆದಿದ್ದವು ಅಂದು ಪತಿ ಅದನ್ನು ಮೆಚ್ಚಿದ್ದ. ತಾನದನ್ನು ಇಂದಿಗೂ ಮೆಚ್ಚಿಕೊಂಡಿದ್ದಾಳೆ. ಈಗಷ್ಟೇ ಬಿರುಗಾಳಿಯಂತೆ ಬಂದ ಗಂಡನ ಶ್ರೀಮಂತಿಕೆಯ ಆವೇಶಕ್ಕೆ ಮಣಿದು, ಬಗ್ಗಿ—ತಗ್ಗಿ ಈವರೆಗೆ ರೂಢಿಸಿಕೊಂಡ ಬಾಳನ್ನು ಬಟ್ಟಿಗೆಡಿಸಿ, ಇನ್ನೇನೋ ಆಗಬೇಕಾದ ಪ್ರಮೇಯ ಅವಳಿಗೆ ಸಹಜ ಸಾಧ್ಯವೆನಿಸಲಿಲ್ಲ. ಇಂಥವಳಿಗೆ ಗಂಡನ ಹಿಂದಿನ ಅವಸ್ಥೆ ಸ್ಥಿರವಲ್ಲವೆನಿಸುವುದರ ಜೊತೆಗೇ ಇಂದಿನದೂ ಸ್ಥಿರವಲ್ಲವೆನಿಸಿಬಿಟ್ಟಿದೆ. ಈಗ ಕೇವಲ ಅವನ ಹುಚ್ಚಿಗಾಗಿ ತನಗೆ ಸ್ವಾಭಾವಿಕವಲ್ಲದ ದಾರಿಯಲ್ಲಿ ಓಡುವುದು ಸರಿಕಾಣುವುದಿಲ್ಲ; ಅಂತೇ ಸಾಧ್ಯವಾಗಿಯೂ ಕಾಣುವುದಿಲ್ಲ.

ಅವಳಿಗರಿಯದಂತೆ ಅವಳಲ್ಲಿ ಒಂದು ನಿಷ್ಠೆ--ವ್ಯಕ್ತಿತ್ವ—ತನ್ನತನ ಎಲ್ಲಾ ಮೈಗೂಡಿಕೊಂಡಿವೆ.ಆದರೆ ರಾಘವೇಂದ್ರ ಇಂದದನ್ನು ಗುರುತಿಸುವ ಕಣ್ಣನ್ನು ಕಳೆದುಕೊಂಡಿದ್ದಾನೆ.

‡ ‡ ‡ ‡

ಜೀವನಕ್ರಮದಲ್ಲಿ ಒಂದು ಪದ್ಧತಿಯಿಂದ ಬೆಳೆದುಬಂದ ಜಾನಕಿಗೆ ಹೊಸ ವಿಚಾರಗಳು ಹೊಳೆದರೂ ಅವು ಆಚಾರಗ್ರಾಹ್ಯವೆನಿಸಲಿಲ್ಲ. ಗ್ರಾಹ್ಯವೆನಿಸಿದರೂ ಸಂಪ್ರದಾಯವನ್ನೆದುರಿಸುವ ಕ್ರಮಕ್ಕೆ ಅಸಾಧಾರಣವಲ್ಲದ ಅವಳ ಬುದ್ಧಿ ಒಗ್ಗದೆ ಮತ್ತೆ ಪರಂಪರಾಪ್ರಿಯವಾಗಿಯೇ ಉಳಿದುಕೊಂಡಿತು.

ಆದರೆ ಸಮಾಜಜೀವನಪಥದಲ್ಲಿ ಕೇವಲ ಜಾನಕಿಯಂಥವರೇ ಇರುವದಿಲ್ಲ. ವಿವೇಚನೆಯಿಂದ ಎದುರಿಸುವುದಿರಲಿ, ಯಾವುದೇ ಕಾರಣದಿಂದ—ಜಾರಿಯೋ, ಅನಿವಾರ್ಯವಾಗಿಯೋ—ಬದಲಾದ ಒಂದು ಪರಿಸ್ಥಿತಿ ನಿರ್ಮಾಣವಾದಾಗ ಜೀವನಕ್ರಮದಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಅದನ್ನು ಸಮರ್ಥಿಸುವ ವಾದಭೂಮಿಕೆ ತಾನೇ ಸಿದ್ಧವಾಗುತ್ತದೆ. ಅದು 'ಸುಧಾರಣೆ' ಎಂಬ ಒಪ್ಪಗೊಂಡ ಹೆಸರಿನಿಂದ ಘೋಷಿಸಲ್ಪಡುತ್ತದೆ. ಆಗ ಇಂಥ ಮನೋಭಾವದವರು ಈ ಘೋಷಣೆಯ ಆಶ್ರಯ ಪಡೆಯುತ್ತಾರೆ. ಅಂಥ ಒಂದು ಪಡೆಯೇ ಸಿದ್ಧವಾಗುತ್ತದೆ.

ಮನುಷ್ಯ ಸಮಾಜ ಜೀವಿ. ಇನ್ನಾವ ಬೌದ್ಧಿಕ ಔನ್ನತ್ಯಕ್ಕೂ ನೆರೆ ಎಂಬುದು ಬೇಡ. ಮೆಟ್ಟಿ ನಿಂತು ಕೀರ್ತಿ ಶಿಖರವನ್ನೇರಿ ತಾನು ಎಲ್ಲರಿಗಿಂತ ಬುದ್ಧಿವಂತ, ಮೇಲಿನವ, ಸಾಮರ್ಥ್ಯವಂತ—ಎಂದು ಕರೆದುಕೊಂಡು, ಕರೆಸಿಕೊಂಡು ಸುಖಿಸಬಹುದು. ಆದರೆ ಬದುಕಿನ ಪ್ರಶ್ನೆ ಬಂದಾಗ, ತನ್ನ ಬಾಳು ಒಂದೇ ಬೇರೆಯಾದರೆ, ಉಳಿದವರ ಬದುಕಿನೊಡನೆ ಏನೂ ಹೋಲಿಕೆಯಿಲ್ಲವಾದರೆ—ಅಂಥ ಜೀವನಕ್ರಮ ತುಂಬ ಕಷ್ಟವಾಗುತ್ತದೆ. ಅಂತೆಯೇ ಕುಟುಂಬಜೀವನ ಒಂದರಂತೆ ಒಂದಲ್ಲದಿದ್ದರೂ ವೈಪರೀತ್ಯವನ್ನು ಎದುರಿಸುವುದು ಕಷ್ಟವೇ. ಕ್ಷಣ-ಕ್ಷಣಕ್ಕೆ ಸಂಪರ್ಕ ಬರುವ ಸಮಾಜವನ್ನು ಏಕಾಕಿಯಾಗಿ ಮೆಟ್ಟಲು ಬರುವದಿಲ್ಲ; ಆಳಲೂ ಬರುವದಿಲ್ಲ; ರೂಪಿಸಲೂ ಬರುವದಿಲ್ಲ. ಅಲ್ಲಿ ಹತ್ತರೊಡನೆ ಹನ್ನೊಂದಾಗಿಯೇ ಬಾಳಬೇಕಾಗುತ್ತದೆ.

† † † †

ಜಾನಕಿ ಇಂಥ ವಿಚಾರವನ್ನು ತನ್ನಲ್ಲಿಯೇ ಸಮರ್ಥಿಸಿಕೊಳ್ಳುತ್ತಾಳೆ. ಪತಿಯೆದುರು ಸೂಚ್ಯವಾಗಿ ವಿವರಿಸುತ್ತಾಳೆ. ಇವಳಲ್ಲಿ ತನ್ನ ಯಾವುದೋ ಆಶೆಯನ್ನು ಈಡೇರಿಸಿಕೊಳ್ಳಲಾರದ ರಾಘವೇಂದ್ರ ಕೆರಳಿ ಆಡಂಬರದ ಮಾತುಗಳನ್ನಾಡಿ ಮನೆ ಬಿಟ್ಟು ಹೋದವ ಇತ್ತೀಚೆ ದಿನದಲ್ಲಿ ಯಾವಾಗಲೋ ಒಮ್ಮೆ ಮನೆಗೆ ಬರುತ್ತಾನೆ. ಬಂದಾಗ ಉಂಡರೆ ಉಂಡ, ಇಲ್ಲವಾದರೆ ಬಿಟ್ಟ. ಆಡುವ ಒಂದೊಂದು ಮಾತೂ ಅಸಹ್ಯ; ಅವನ ರೀತಿಯೂ ಅಸಹ್ಯ. ಕುಡಿದ ಅಮಲಿನಲ್ಲಿ ತೂರಾಡುತ್ತ ಬಂದ ಪತಿಯನ್ನು ಜಾನಕಿ ಎದುರಿಸಲಾರದೆ ಅವನ ಸಹವಾಸವನ್ನೇ ಅಪೇಕ್ಷಿಸದೆ, ತನ್ನಷ್ಟಕ್ಕೆ ತಾನು ಇದ್ದು

ಬಿಡುತ್ತಾಳೆ. ಪತಿಯ ಶ್ರೀಮಂತಿಕೆಯ ಈ 'ಸುಖ' ಅವಳು ಬಯಸಲಿಲ್ಲ. ಬಂದಾಗ 'ಅನುಭವಿಸುವುದೂ' ತಪ್ಪಲಿಲ್ಲ.

* * *

ಒಂದು ವರುಷದಿಂದ ಪತಿ ಮನೆಗೆ ಬಂದೇ ಇಲ್ಲ; ಜಾನಕಿ ಮನೆಯಿಂದ ಹೊರಬಿದ್ದೇ ಇಲ್ಲ. ಜೀವಧಾರಣೆಗೆ ಒಂದಿಷ್ಟು ಉಣ್ಣುತ್ತಾಳೆ. ಮೈ ಮುಚ್ಚಲು ಒಂದು ಉಡುತ್ತಾಳೆ. ಯಾರು ಯಾರೋ ಬಂದು ಕೇಳುತ್ತಾರೆ; ಏನು ಏನೋ ಹೇಳುತ್ತಾಳೆ. ಮೈಮೇಲಿನ ಒಡವೆ ಒಂದೊಂದಾಗಿ ಕರಗಿ ಹೋಗುತ್ತಿವೆ.

ರಾಘವೇಂದ್ರ ಒಬ್ಬ ಸೂಳೆಯ ಸೋಬತಿಯಾದುದನ್ನವಳು ಬಲ್ಲಳು. ಅವಳಿಂದ ಪತಿಯನ್ನು ಬಿಡಿಸಿ ತಂದು ಬಾಳಬೇಕೆಂಬ ಮೊದಮೊದಲಿನ ಅವಳ ಬಯಕೆ ಇಂದು ಕಮರಿ ಹೋಗಿದೆ. ಹಿಂದಿನ ಒಂದೊಂದೇ ಸುಖ ನೆನಸುತ್ತಾಳೆ. ಅಂದಿನ ನೆನಪು ನಿತ್ಯವಾಗಿವೆ. ಅವುಗಳೇ ಅವಳನ್ನು ಇಷ್ಟು ದಿನ ಕಾಪಾಡಿದ್ದು.

† † † †

ಇಂಥ ಪಾಡು ಹೆಣ್ಣಿಗೆ ಇಂದೇ ಬಂದುದಲ್ಲ; ಜಾನಕಿಯೊಬ್ಬಳಿಗೇ ಬಂದುದಲ್ಲ. ಕಾಲಪ್ರವಾಹದಲ್ಲಿ ಇಂಥ ಘಟನೆಗಳೆಷ್ಟೋ ಉರುಳಿ ಬಂದಿವೆ: ತೇಲಿಯೂ ಹೋಗಿವೆ. ಸ್ತ್ರೀಯ ಕೋಮಲ ಹೃದಯ ಕಲ್ಲಾಗಿ, ಪ್ರವಾಹದ ಸೆಳೆತಕ್ಕೆ ಸಿಕ್ಕು, ಸವೆದು ಸವೆದು, ಕಾಠಿಣ್ಯವನ್ನಿಟ್ಟುಕೊಂಡೂ ನುಣುಪುಗೊಂಡು, ರೂಪುಗೊಂಡು, ತನ್ನ ಒರಟುತನದ ಕಣಗಳನ್ನು ದುರಿಸಿಕೊಂಡು ಉರುಳುವ ಗಾಲಿಯಾಗಿ, — ಅದೇ ಪ್ರವಾಹದತ್ತ. ಅದೇ ನಿರ್ದಿಷ್ಟ ಕೊರಕಲಿನ ಪರಿಮಿತಿಯಲ್ಲಿ, ನೀರಿನಲ್ಲಿದ್ದೂ ಅದನ್ನು ಹೀರದೆ, ರಾಡಿಯಲ್ಲಿದ್ದೂ ಅದಕ್ಕೆ ಬಲಿಯಾಗದೆ, ತಂತಾನೆ ಪರಿಶುದ್ಧವಾಗಿ, ನಿಚ್ಚಳವಾದ ಉಸುಕಿನ ಗಟ್ಟಿ ಚೆಂಡಾಗಿ, ಆ ದಂಡೆಗೆ ಬಡೆದು, ಈ ದಂಡೆಗೆ ಬಡೆದು, ಕೊನೆಗೊಮ್ಮೆ ತನ್ನ ಜೀವನವನ್ನು ಅನಂತ ಜೀವನದೊಡನೆ ಒಂದಾಗಿಸಿ ಮುಕ್ತವಾಗುವುದು.

ಪ್ರತಿಯೊಂದು ಜೀವ ಈ ಗುರಿಯೆಡೆಗೆ—ಸಾವಿನೆಡೆಗೆ ಧಾವಿಸುತ್ತಿದೆ ಯಾದರೂ ಅದರ ಗತಿ-ಪಥಗಳು ಒಂದಲ್ಲ; ಸಾವಿರ ಬಗೆ. ತೀವ್ರ ಮನೋವೇದನೆಯಿಂದ ಒಂದು ಜೀವ ಸಾವನ್ನಪ್ಪಬಹುದು. ತಾಳ್ಮೆಯಿದ್ದ ಜೀವ ಇಂದು—ನಾಳೆಯೆಂದು ಕಾಲ ಹಾಕಬಹುದು. ಈ ಕಾಲಯಾಪನೆಯಲ್ಲಿ ಒಮ್ಮೆ ಒಂದು ಆಸೆ ಚಿಗುರಬಹುದು; ಸಾಗಬಹುದು. ಆಸೆ ಕೈಗೂಡಬಹುದು;

ಹಾಗೆ ಭ್ರಮೆಯಾಗಲೂ ಬಹುದು. ಈ ಘಟನಾಕ್ರಮ ಯಾವುದೋ ಒಂದು ಸಂಕಲ್ಪದ ಫಲವಾಗಿ ನಡೆಯುತ್ತದೆಂದೋ, ಕರ್ಮಫಲವೆಂದೋ-ದೈವಲೀಲೆಯೆಂದೋ ಕರೆಯಿಸಿಕೊಳ್ಳುತ್ತದೆ. ಆದರೆ ಈ ಕರ್ಮಪಥ ಮಾತ್ರ ತಪ್ಪಿದ್ದಲ್ಲ.

* * * *

ಜಾನಕಿಗೆ ಒಮ್ಮೆ ಜೀವ ಬೇಸರವಾಗುತ್ತದೆ. ಬಾವಿ-ಕೆರೆಗಳು ಕರೆಯುತ್ತವೆ. ಮರುಕ್ಷಣ ತಾನು ಗಂಡನ ತಪ್ಪಿಗೆ ದುರ್ಮರಣಕ್ಕೀಡಾದರೆ, ಸತ್ತ ಮೇಲೆ ಬರುವ ಆರೋಪ ತನ್ನ ಪಾಲಿಗೇ ಬಂದರೆ—ಎಂದು ಬೆದರುತ್ತಾಳೆ.

ಇರುವಾಗ ಒಳ್ಳೆಯವಳಾಗಿದ್ದು, ಸತ್ತು ಕೆಟ್ಟವಳಾಗಬೇಕೇ ಎಂದು ತರ್ಕ ಮಾಡುತ್ತಾಳೆ. ತಾನು ಒಳ್ಳೆಯವಳಾಗಿದ್ದರೆ ತನಗೆ ಈ ಪಾಡು ಯಾಕೆ ಬರುತ್ತಿತ್ತು —ಎಂದು ಯೋಚನಾಪರಳಾಗುತ್ತಾಳೆ. ಅವಳಿಗೆ ತನ್ನ ತಪ್ಪು ಯಾವುದೂ ಕಾಣುವದಿಲ್ಲ. ಹಾಗಾದರೆ ತನ್ನ ಗಂಡನಿಗೆ ತಾನು ಏಕೆ ಬೇಡವಾದೆ ಎಂದು ಚಿಂತಿಸುತ್ತಾಳೆ. ಅವಳಿಗೆ ಹೊಳೆಯುವ ಉತ್ತರ ಒಂದೆ: ಆ ಸೂಳೆ ಬೇಕಾದಳು; ಅಂತೇ ನಾನು ಬೇಡವಾದೆ!

ಒಳಗಿನ ಇನ್ನೊಂದು ದನಿ ಎದ್ದು 'ಅವಳೇಕೆ ಬೇಕಾದಳು?' ಎಂದು ಕೇಳುತ್ತದೆ. ಅದಕ್ಕೆ ಉತ್ತರ ಜಾನಕಿಯ ಮನೋವಲಯದಲ್ಲಿ ಕಾಣುವುದೇ ಇಲ್ಲ.

ಒಳ್ಳೆಯ ಮಾತು, ಕೀರ್ತಿ ಇವು ಮನುಷ್ಯನನ್ನು ಸದಾ ಕಾಡುವ ಭಾವನೆಗಳು. ಇರವು ಬೇಸರವಾದರೂ ಒಳ್ಳೆಯತನ ಬೇಕೇ ಬೇಕು. ಅದು ಸತ್ತರೂ ಬೇಕು. ಇದರಿಂದಲೇ ಬದಕು ನಡೆದಿದೆ; ಸಾವು ಹರದಾರಿ ಸರಿದಿದೆ.

* * * *

ಜಾನಕಿಗೆ ಪದ್ಮಿನಿಯ ನೆನಪು ಮತ್ತೆ ಮತ್ತೆ ಬರುತ್ತದೆ. ಅಂದವಳು ತನ್ನನ್ನು ಹುಡುಕಿಕೊಂಡು ಬಂದಂತೆ ತಾನೊಮ್ಮೆ ಯಾಕೆ ಅವಳನ್ನು ಕಂಡು ಬರಬಾರದು—ಎಂದುಕೊಳ್ಳುತ್ತಾಳೆ. ಆದರೆ ಅವಳಿಗೆ ಏನೆಂದು ಮುಖ ತೋರಿಸುವುದು? ಅವಳು "'ನೀನೆ ನೀನಾದಾಗ'—'ಒಡೆತನ ಮರೆತಾಗ ಬಾ"—ಎಂದಿದ್ದಳು. ಇಂದು ಆವಳು ಕೇಳುವ ವ್ಯಕ್ತಿತ್ವ, ನಿಷ್ಠೆ ತನ್ನಲ್ಲುಳಿದಿರಲಿಕ್ಕಿಲ್ಲ. ಆದರೂ ನಾನು ನಾನೇ ಆಗಿದ್ದೇನೆ. ಈಗ ನನ್ನನ್ನು 'ಅವರು' ಆಳುವದಿಲ್ಲ. ನಾನು 'ಅವರ'ನ್ನು ಆಳುವದಿಲ್ಲ. ಆ ಮಟ್ಟಿಗೆ ನಾನು ಅವ

ಳನ್ನು ಕಾಣುವ ಪಾತ್ರತೆಯನ್ನು ಹೊಂದಿದ್ದೇನೆ. ಯಾಕೆ ಅವಳನ್ನು ಕಂಡು ಬರಬಾರದು ? ಬೇಡ; ಒಂದು ಕಾಗದ ಬರೆದರೆ ಅವಳೇ ಬಂದಾಳು.

‡ ‡ ‡ ‡

ಇವರ ಹುಚ್ಚು ನಿಜವಾದ ಮಬ್ಬು ಆಗಿದ್ದರೆ ಒಂದೆರಡು ದಿನದ್ದಿರ ಬೇಕಿತ್ತು; ಒಂದೆರಡು ತಿಂಗಳಿಗೆ ಸರಿಯಬೇಕಿತ್ತು. ಆದರೆ ? ವರ್ಷಾವಧಿ ಯಲ್ಲಿಲ್ಲ ತನಗೆ ಹೆಂಡತಿಯೊಬ್ಬಳಿದ್ದಾಳೆ–ಎಂಬ ನೆನಪು ಇರದವರನ್ನೂ ತಿರುಗಿ ಪಡೆಯುವುದು ಯಾವ ಸುಖಕ್ಕೆ ?

ನನಗವರು ಬುದ್ಧಿ ಕಲಿಸಬಯಸಿದರೆ ? ಅವರಿಗಿಂಥ ಹೊಂಡದಲ್ಲಿಳಿ ಯಲು ಯಾವ ಆದರ್ಶದ ರಕ್ಷೆಯಿತ್ತು ? ನನ್ನೊಬ್ಬಳ ಬಾಳಿಗೆ ಬೆಂಕಿ ಇಡು ವುದೇ ಒಂದು ಆದರ್ಶವೇ ? ಜನ ಇದನ್ನು ಮೆಚ್ಚೀತೇ ? ಜನ–ಸಮಾಜ ಎಂದು ಯೋಚಿಸುವವಳು ತಾನು! ಆದರೆ ಅವರು? ಇಂಥ ಯೋಚನೆ ಇದ್ದರೆ ತನ್ನ ಬೆಂಬಲಕ್ಕೆ ಯಾರಿದ್ದಾರೆಂದು ಬಗೆದರು ? ಇಂದು ನನ್ನ ಸಾಂತ್ವನ ಕ್ಕೆಂದು ಬರುವ ಗೆಳತಿಯರು, ಬಳಗದವರು ಅವರನ್ನು ನನ್ನೆದುರು ಅನ್ನು ತ್ತಾರೆ; ನಿಂದಿಸುತ್ತಾರೆ. ಅದೇ ತಾವು ತೋರುವ ಸಹಾನುಭೂತಿಯೆಂದು ಬಗೆಯುತ್ತಾರೆ. ಆದರೆ ಅವರ ಬಳಿಗೆ ಯಾರು ಹೋಗುತ್ತಾರೆ ? ಏನು ಹೇಳು ತ್ತಾರೆ ? ನೀವು ಮಾಡಿದ್ದು ತಪ್ಪು ಎಂದು ಯಾರು ಹೋಗಿ ಹೇಳುತ್ತಾರೆ ? ಸರಿ ಎನ್ನುವವರಾದರೂ ಯಾರಾದರೂ ಹೋಗಿ ಹೇಳುವರೆ ? ಯಾರು ಬಲ್ಲರು ?

ಈ ಸರಿ–ತಪ್ಪುಗಳನ್ನು ಹುಟ್ಟಿಸುವವರು ಯಾರು ? ತಾವೇ ಅಲ್ಲವೆ ? ಅದು ವ್ಯಕ್ತಿಯ ಸ್ವಂತ ಜೀವನಕ್ಕೆ ಅನುವು ಮಾಡಿಕೊಡುವಂತೆ, ಸುಖ ಕೊಡು ವಂತೆ ಇದ್ದರೆ ಅದು ಅವನ–(ಳ) ಮಟ್ಟಿಗೆ ಸರಿ. ಅದಕ್ಕೆ ವ್ಯತಿರಿಕ್ತವಾದದ್ದು ಅವನ–(ಳ) ಮಟ್ಟಿಗೆ ತಪ್ಪು. ನಾಲ್ಕು ಜನ ಹಾಗೂ ಅನ್ನುತ್ತಾರೆ; ಹೀಗೂ ಅನ್ನುತ್ತಾರೆ. ಸ್ವಂತ ಬುದ್ಧಿಯೆಂಬುದು, ವ್ಯಕ್ತಿನಿಷ್ಠೆಯೆಂಬುದು ಈ ನಾಲ್ಕು ಜನ ದಲ್ಲಿ ವ್ಯಕ್ತವಾಗಿ ಕಂಡೀತು; ಕಾಣಲಿಕ್ಕಿಲ್ಲ. ಆದರೆ ಪ್ರತಿ ಜೀವಮಾತ್ರಕ್ಕೆ ಇರ ಬೇಕಾಗುತ್ತದೆ. ಅದು ಪದ್ಮಿನಿಯಲ್ಲಿತ್ತು. ನನ್ನಲ್ಲಿಲ್ಲವೆಂದು ಅವಳು ಹೇಳಿ ದ್ದಳು........

‡ ‡ ‡ ‡

ಪದ್ಮಿನಿ ಬಂದು ಜಾನಕಿಯ ಎದುರು ನಿಂತಿದ್ದಾಳೆ. ಜಾನಕಿ ಕಂಡು ಬೆಚ್ಚಿಬಿದ್ದಳು. ಮತ್ತೆ ಸಾವರಿಸಿಕೊಂಡು “ ಬಾ, ಪದ್ಮಾ ” ಎಂದಳು.

ಪದ್ಮಿನಿ ಅವಳ ಪಕ್ಕದಲ್ಲೇ ಕುಳಿತು ಬಾಡಿದ ಜಾನಕಿಯ ಮುಖವನ್ನು ತನ್ನೆರಡು ಕೈಗಳಿಂದ ಹಿಡಿದು ನೋಡಿದಳು. ತಡೆಯದೆ ಅಳತೊಡಗಿದಳು.

'ಪದ್ಮಿನಿ ಅಳುತ್ತಾಳೆ' ಎಂಬುದೇ ಜಾನಕಿಗೆ ನಂಬಲು ಬಾರದ ಮಾತಾಗಿತ್ತು. ಆದರೂ ಅದು ನಿಜ!

"ಇದೇನೆ? ನನ್ನ ಪದ್ಮಾ ಎಂದಾದರೂ ಅಳುವುದುಂಟೆ?"

"ಜಾನಕಿ, ನಿನ್ನನ್ನು ಈಗ ಕಂಡು ಯಾರೂ ಅಳಬೇಕು. ನಾನೂ ಅಳಬಲ್ಲೆ. ಅದೆಲ್ಲ ಇರಲಿ. ಎರಡು ದಿನ ನಾನು ನಿನ್ನಲ್ಲಿರಬೇಕೋ, ನೀನೇ ನಾಲ್ಕು ದಿನ ಸ್ಥಳ ಬದಲಿಸಿದಂತಾಯಿತು—ಎಂದು ನನ್ನಲ್ಲಿ ಬರುವಿಯೋ?"

"ಸ್ಥಳ ಬದಲಿಸುವುದು ನಾಲ್ಕು ದಿನಕ್ಕಷ್ಟೇ ಅಲ್ಲ—ಪದ್ಮಾ; ಅದು ಅನಂತಕಾಲಕ್ಕೂ ಅನಿವಾರ್ಯವಾಗಿದ್ದೀತು—ನನಗೆ. ಅದಕ್ಕೂ ಮೊದಲು ಎರಡು ದಿನ ನೀನಿಲ್ಲೇ ಇರು."

"ಆಗಲಿ."

‡ ‡ ‡ ‡

ಜಾನಕಿಗಾಗಿ ಪದ್ಮಿನಿ ತಾನಾಗಿಯೇ ಒಮ್ಮೆ ರಾಘವೇಂದ್ರನನ್ನು ಅವನ ಸೂಳೆಯ ಮನೆಯಲ್ಲಿ ಕಂಡುಬಂದಳು. ಆ ಸ್ಥಳಕ್ಕೆ ಹೋಗುವ ವಿಚಾರದಲ್ಲಿ ಪದ್ಮಿನಿಯ ನಿರ್ಧಾರಕ್ಕೆ ಜಾನಕಿ ಎದುರು ನುಡಿಯಲಿಲ್ಲ ತನ್ನ ಹಣೇಬರಹ ತನಗೆ ತಿಳಿದಿದ್ದರೂ ಪದ್ಮಿನಿಗೆ ಅದರ ಅರಿವಾಗಬೇಕೆಂದು— ಅದು ಪ್ರತ್ಯಕ್ಷ ಅನುಭವದಿಂದಲೇ ಸಾಧ್ಯವೆಂದು ಸುಮ್ಮನಿದ್ದಳು. ಅದು ಹಾಗೇ ಆಯಿತು.

ರಾಘವೇಂದ್ರ ಜಾನಕಿಯ ವಿಷಯ ಮಾತಾಡುವದಿರಲಿ, ಪದ್ಮಿನಿಯೊಡನೆಯೇ ಅಸಭ್ಯನಾಗಿ ನಡೆದುಕೊಂಡ. ಆ ಸೂಳೆಯೂ ಅಪಹಾಸ್ಯ ಮಾಡಿದಳು.

ಪದ್ಮಿನಿ ಆಗ ಜಾನಕಿಗಾಗಿ ಅಳಲಿಲ್ಲ. ತನಗಾದ ಅವಮಾನಕ್ಕೆ ಕೆರಳಿದಳು. ಅಲ್ಲೇ ಪಂಥ ಹೇಳಿದಳು: "ಜಾನಕಿಗೆ ಇನ್ನೊಂದು ಮದುವೆ ಮಾಡಿಸಿ ನಿನ್ನ ಸೊಕ್ಕು ಇಳಿಸುತ್ತೇನೆ—ಎಚ್ಚರ! ನಾನು ಜಾನಕಿಯಲ್ಲ. ಜಾನಕಿಯೂ ಅಂದಿನ ಜಾನಕಿಯಾಗಿ ಉಳಿದಿಲ್ಲ-ಜೋಕೆ! ಕೆಲವೇ ದಿನದಲ್ಲಿ ಡಾಯವ್ಹೋರ್ಸ ನಡೆದು ಬಿಡುತ್ತದೆ—" ಎಂದವಳೇ ಕಾಲಪ್ಪಳಿಸುತ್ತ, ಅವರನ್ನು ಶಪಿಸುತ್ತ ಹೊರಟು ಬಂದಳು.

ಬಂದವಳು ಜಾನಕಿಯನ್ನು ಕಂಡು ಏನು ಹೇಳಬೇಕೆಂದೇ ತೋಚದೆ ಕುಳಿತಳು. ಅವಳಿಗೆ ಅವಮಾನವಾಗಿರಬೇಕೆಂದು ಗ್ರಹಿಸಿದ ಜಾನಕಿಯೇ ಪದ್ಮಿನಿಗೆ ಸಮಾಧಾನ ಹೇಳಬೇಕಾಯಿತು.

ಪದ್ಮಿನಿಯ ನೆರೆಯಲ್ಲಿ ಜಾನಕಿ ಎರಡು ದಿನ ಹಾಯಾಗಿ ಕಳೆದಳು. ಆದರೆ ಮುಂದೆ ಪದ್ಮಿನಿಯ ಹಿತೋಪದೇಶದಿಂದ ನೊಂದುಕೊಂಡಳು. ವ್ಯಕ್ತಿನಿಷ್ಠೆಯ ಮೂರ್ತಿಮಂತ ಸಂಕೇತದಂತಿದ್ದ ಪದ್ಮಿನಿ ತನ್ನ ಅಶನಾರ್ಥಕ್ಕೆ 'ಪೋಟಗಿ ದಾವೆ' ಮಾಡಲು ಹೇಳಬೇಕೇ? ಹೆಣ್ಣು ಪರಾಧೀನೆಯಲ್ಲ— ಎನ್ನುವ ಪದ್ಮಿನಿ, ತನ್ನ ಹೊಟ್ಟೆಗೆ, ಬಟ್ಟೆ ಗಂಡನೇ ಗತಿಯಾಗಬೇಕೆಂದು ಹೇಳುವ ಮಾತಿಗಾಗಿ ಮರುಕವೆನಿಸಿತು ಜಾನಕಿಗೆ. ಹೌದು; ಕ್ರೋಧ, ಉರಿ, ಮತ್ಸರ—ಎಲ್ಲಾ ಬಂದು ಬಂದು, ಆಟವಾಡಿ, ಆರಿ ಹೋಗಿವೆ—ಜಾನಕಿಗೆ. ಆತ್ಮಹತ್ಯೆಯ ವಿಚಾರ, ಮತ್ತೊಂದು ಮದುವೆಯ ಮೀಮಾಂಸೆಯನ್ನೆಲ್ಲ ಅವಳು ತಡಕಾಡಿ ಬಿಟ್ಟಿದ್ದಾಳೆ. ಆದೆಲ್ಲಾ ಅಬಲೆಯ ಬಲವೆಂದು ಇಂದು ಜಾನಕಿ ನಂಬುವದಿಲ್ಲ. ಹೆಣ್ಣು ಕೇವಲ ಹೊಟ್ಟೆಯ ಪಾಡಿಗಾಗಿ ಗಂಡನ ಕೈಹಿಡಿದಳೆ? ದೇಹದ ಹಸಿವೊಂದು ಹಿಂಗಿದರೆ ಸಾಕೆ? ಇದಲ್ಲದೆ ಕೊಡುವುದು, ಪಡೆಯುವುದು, ಇನ್ನೇನಿಲ್ಲವೆ? ಅದು ಇಲ್ಲವಾದರೆ ಸಂಸಾರ ಜೀವನದಲ್ಲಿ ಯಾಕೆ ಈ ವ್ಯತ್ಯಾಸಗಳು? ಗಂಡು ದುಡಿಯುತ್ತಾನೆ; ಹೆಣ್ಣು ಕೂತು ಉಣ್ಣುತ್ತಾಳೆ. ಇಬ್ಬರ ದೇಹಕ್ಕೂ ಹಸಿವಿದೆ; ಪರಸ್ಪರ ಹಿಂಗಿಸಿಕೊಳ್ಳುತ್ತಾರೆ. ಹೆಣ್ಣು ತಾನು ಗಂಡಿನ ಅಧೀನೆ ಎಂಬುದರಲ್ಲಿ ಸುಖಿಸುತ್ತಾಳೆ. ಗಂಡು ಅವಳನ್ನು ಆಳುತ್ತೇನೆಂದು ಮೆರೆಯುತ್ತಾನೆ. ಆಯಿತು. ಜೀವನಕ್ಕೆ ಇದಿಷ್ಟು ಸಾಕಾದರೆ, ಜೀವನದ ಗುರಿ ಇಷ್ಟೇ ಆದರೆ ಎಲ್ಲ ಕುಟುಂಬಗಳು ನಂದನಗಳಾಗಬೇಕಿತ್ತು. ಬದಲು ಇಂದು ಎಲ್ಲಾ ಕಡೆ ಕೇಳುವ ಅಪಸ್ವರ, ಕಾಣುವ ಅವಲಕ್ಷಣ ಎಲ್ಲಿಂದ ಬರುತ್ತವೆ? ಯಾಕೆ ಬರುತ್ತವೆ?

ಇಲ್ಲ; ಇದು ಮಾತ್ರ ಬದುಕಲ್ಲ. ಇನ್ನೇನೋ ಅವ್ಯಕ್ತವಾದ ಆಕಾಂಕ್ಷೆ ಮನುಷ್ಯನ ಮನಸ್ಸಿನಲ್ಲಿ ಮೋಡವಾಗಿ ತೇಲುತ್ತಿದೆ; ಅದು ಇದೇ—ಎಂಬ ಎಣಿಕೆಯಲ್ಲಿ ಅವನು ಇನ್ನೇನನ್ನೋ ಮಾಡುತ್ತಾನೆ. ಮತ್ತೇನನ್ನೋ ಪಡೆದು ಒಮ್ಮೆ ಸುಖಿಸುತ್ತಾನೆ; ಒಮ್ಮೆ ದುಃಖಿಸುತ್ತಾನೆ. ಈ ಭ್ರಮೆಯೇ ಜೀವನವೆ? ಅಲ್ಲ; ಆದರೆ ಮತ್ತೇನು?

'ಮದುವೆಯೆಂದರೆ ಸೆರೆ' ಎಂದು ಸಾರುವ ಪದ್ಮಾ ಅದರ ಹೆದರಿಕೆಯಿಂದ ಮದುವೆಯಾಗಲಿಲ್ಲ. ಅದರ ಸುಖದಿಂದ ವಂಚಿತಳಾದದ್ದು, ಅದರ

ದುಃಖದ ಅನುಭವದಿಂದ ವಂಚಿತಳಾದದ್ದು ಅವಳ ಗಮನಕ್ಕೇ ಬರುವದಿಲ್ಲ. ನಾನು ಎರಡನ್ನೂ ಪಡೆದೆ. ಗಂಡನಿದ್ದೂ ಇಲ್ಲದ ವೈಧವ್ಯವನ್ನೂ ಕಂಡೆ. ಸೆರೆಯ ಸುಖ, ಬಿಡುಗಡೆಯ ಕಷ್ಟ ಎರಡನ್ನೂ ಕಂಡೆ.

ಪದ್ಮಿನಿಯ ಪಂಥಕ್ಕೆ ನಾನು ಇನ್ನೊಂದು ಮದುವೆಯಾಗಬೇಕು. ಯಾವ ಸುಖಕ್ಕೆ? ಯಾರ ಸುಖಕ್ಕೆ? ಈ ಗಂಡನಿಗೆ ಬುದ್ಧಿ ಬರಬೇಕು! ಆಗ ಬಂದು ಯಾವ ಪ್ರಯೋಜನ? ಅವರಿಗೆ ಬುದ್ಧಿ ಬರುವುದು ನನ್ನ ಎರಡನೆಯ ಮದುವೆಯನ್ನೇ ಯಾಕೆ ಹೊಂದಿರಬೇಕು?

ಹೌದು; ಶಾಸನದ ರಕ್ಷೆಯಿದೆ. ನಾನು ಇನ್ನೊಂದು ಮದುವೆಯಾಗಬಹುದು.

ಧರ್ಮ-ಸಂಪ್ರದಾಯಗಳು ಕಾಲಕ್ಕೆ ತಕ್ಕಂತೆ ಅರ್ಥವ್ಯತ್ಯಾಸ ಹೊಂದಬಹುದು. ಆಚಾರಗಳು ಬದಲಾಗಬಹುದು. ಆದರೆ ಇವುಗಳಿಗೆ ಪಳಗದ ಮಾನಸಿಕ ಒತ್ತಡ, ಭಾವ-ಬಂಧನಗಳಿಗೆ ಯಾವ ಪರಿಹಾರವಿದೆ? ಸಾವಿರಾರು ವರುಷದ ಪರಂಪರೆಯ ಸಂಕೋಲೆಯನ್ನು ಶಾಸನರಕ್ಷೆಯೊಂದೇ ಕಳಚಬಹುದೇ?

ಆ ಎರಡನೆಯ ಗಂಡ! ಅವನು ನನ್ನಿಂದ, ಈ ಹರಿದ ಮನಸ್ಸಿನ ನನ್ನಿಂದ ಯಾವ ಸುಖ ಕಂಡಾನು? ಅವನಿಗೆ ನಾನು ಏನನ್ನು ಕೊಟ್ಟೇನು? ಅವನಿಂದ ಪಡೆಯಬೇಕಾದುದು ನನಗೇನಿದ್ದೀತು?

ಈ ಪದ್ಮಿನಿ ಯಾರಿಗೆ ಪಾಠ ಕಲಿಸಬೇಕೆಂದಿದ್ದಾಳೆ? ನನ್ನ ಮೊದಲ ಗಂಡನಿಗೋ, ಬರುವ ಎರಡನೆಯ ಗಂಡನಿಗೋ?

ನನಗೋ-ತನಗೋ!

* * * *

ಎದುರು ಬಂದ ಪದ್ಮಿನಿ ಕೇಳಿದಳು:

"ಜಾನಕಿ ನಿನ್ನ ನಿರ್ಧಾರವೇನು?"

"ಪದ್ಮಾ, ನೀನು ನಿನ್ನ ಮೊದಲ ಮದುವೆಗಾದರೂ ಸಿದ್ಧಳಾಗು. ನಂತರ ನಾನು ಇನ್ನೊಂದು ಮದುವೆಯಾದೇನು.?"

ನಿಶ್ಚಲಳಾಗಿ ನಿಂತು ಆಡಿದ ಜಾನಕಿಯ ಮಾತನ್ನು ಕೇಳಿ ಪದ್ಮಿನಿ ಒಮ್ಮೆ ತನ್ನನ್ನು ನೋಡಿಕೊಂಡಳು. ಮತ್ತೆ ಜಾನಕಿಯನ್ನು ನೋಡಿದಳು.